* ಮಲಾಲ ಯುಸುಫ್ ನೋಬೆಲ್ ಪ್ರಶಸ್ತಿ ಗೆದ್ದ ಅತಿ ಕಿರಿಯ ವಯಸ್ಸಿನ ವ್ಯಕ್ತಿ

ಪಾಕಿಸ್ತಾನ, 17 ವರ್ಷ ನೋಬೆಲ್  ಶಾಂತಿ ಪ್ರಶಸ್ತಿ 2014

* ಲಿಯೋನಿಡ್ ಹರ್ವಿಚ್

ನೋಬೆಲ್ ಪ್ರಶಸ್ತಿ ಗೆದ್ದ ಅತಿ ಹಿರಿಯ ವ್ಯಕ್ತಿ ವರ್ಷ 90

,ಅಮೆರಿಕ. ಅರ್ಥಶಾಸ್ತ್ರ ನೋಬೆಲ್ 2007

ಭಾರತ ಮೂಲದವರಿಗೆ ಒಲಿದ ನೋಬೆಲ್✍

ರೋಲಾನ್ಡ್ ರೋಸ್ ( ವೈದ್ಯಶಾಸ್ತ್ರ) 1902

ರವೀಂದ್ರನಾಥ ಠಾಗೋರ್( ಸಾಹಿತ್ಯ) 1913

ಹರಗೋಬಿಂದ ಖುರಾನ ( ವೈದ್ಯಶಾಸ್ತ್ರ)1968

ಸುಬ್ರಹ್ಮಣ್ಯನ್ ಚಂದ್ರಶೇಖರ್(ಭೌತಶಾಸ್ತ್ರ)1983

ಅರ್ತ್ಯ ಸೇನ್ ( ಅರ್ಥಶಾಸ್ತ್ರ)1998

ಸಿ.ವಿ ರಾಮನ್(ಭೌತಶಾಸ್ತ್ರ)1930

ಮದರ್ ತೆರೇಸಾ(ಶಾಂತಿ)1979

ವೆಂಕಟರಾಮನ್ ರಾಮಕೃಷ್ಣ(ರಸಾಯನಶಾಸ್ತ್ರ)2009

ಕೈಲಾಸ್ ಸತ್ಯಾರ್ಥಿ (ಶಾಂತಿ)2014°

ವಿಶ್ವದ ಅತ್ಯುತ್ತಮ ಪ್ರವಾಸಿತಾಣ ತಾಜ್

ನವದೆಹಲಿ: ಯುನೆಸ್ಕೋದ ವಿಶ್ವ ಪಾರಂಪರಿಕ ತಾಣಗಳ ಪಟ್ಟಿಯಲ್ಲಿ ತಾಜ್‌ವುಹಲ್ ಎರಡನೇ ಅತ್ಯುತ್ತಮ ತಾಣವೆಂದು ಗುರುತಿಸಿಕೊಂಡಿದೆ. ಟ್ರಾವೆಲ್ ಪೋರ್ಟಲ್ ಟ್ರಿಪ್‌ಅಡ್ವೈಸರ್ ನಡೆಸಿರುವ ಸಮೀಕ್ಷೆಯಲ್ಲಿ ಕಾಂಬೋಡಿಯಾದ ಅಂಗ್‌ಕೋರ್ ವಾಟ್ ಮೊದಲ ಸ್ಥಾನದಲ್ಲಿದ್ದರೆ, ತಾಜ್ ಮಹಲ್ ಎರಡನೇ ಸ್ಥಾನದಲ್ಲಿದೆ.ವಿಶ್ವಾದ್ಯಂತದ ಪ್ರವಾಸಿಗರ ಅಭಿಪ್ರಾಯವನ್ನಾಧರಿಸಿ ಈ ರ ್ಯಾಂಕಿಂಗ್ ನೀಡಲಾಗಿದೆ. ಪ್ರವಾಸಿಗರಿಗಿರುವ ವ್ಯವಸ್ಥೆಗಳು, ವಾಹನ, ವಸತಿ ವ್ಯವಸ್ಥೆ ಮುಂತಾದವುಗಳನ್ನು ಆಧರಿಸಿ ಆಯ್ಕೆ ನಡೆಸಲಾಗಿದೆ. ಚೀನಾದ ಮಹಾಗೋಡೆ ಈ ಪಟ್ಟಿಯಲ್ಲಿ ಮೂರನೇ ಸ್ಥಾನದಲ್ಲಿದ್ದರೆ, ಪೆರುವಿನ ಮಾಚು ಪಿಚು, ಬ್ರೆಜಿಲ್‌ನ ಇಗ್ವಾಜು ನ್ಯಾಷನಲ್ ಪಾರ್ಕ್, ಇಟಲಿಯ ಸಾಸ್ಸಿ ಆಫ್ ಮಟೆರಾ, ಪೊಲೆಂಡ್‌ನ ಆಶ್ಚುವಿಟ್ಸ್ ಬಿರ್ಕೆನಾವ್, ಇಸ್ರೇಲ್‌ನ ಜೆರುಸಲೆಂ, ಟರ್ಕಿಯ ಇಸ್ತಾಂಬುಲ್ ನಂತರದ ಸ್ಥಾನದಲ್ಲಿವೆ. -

••••• ಮಾಹಿತಿ ವೇದಿಕೆ ••••••••

## *ಭಾರತವನ್ನು ಕಾಡಿದ ಅಪಾಯಕಾರಿ ಚಂಡಮಾರುತಗಳು*✍

ಓಖಿಯಾಂತ ಚಂಡಮಾರುತ ಭಾರತಕ್ಕೆ ಹೊಸದಲ್ಲ.ಕಳೆದ ಹಲವು ವರ್ಷಗಳಿಂದ ಭಾರತಕ್ಕೆ ಹಲವು ಅಪಾಯಕಾರಿ ಚಂಡಮಾರುತಗಳು ಎದುರಾಗಿದೆ.

### 1 ಹುಧುದ್ - 2014

2014 ರಲ್ಲಿ ಒಡಿಶಾ ಮತ್ತು ಆಂದ್ರಪ್ರದೇಶಗಳಿಗೆ ಅಪ್ಪಳಿಸಿದ ಹುಧುದ್ ಎಂಬ ಚಂಡಮಾರುತ 185 ಕಿ.ಮೀ.ವೇಗದಲ್ಲಿ ವಿಶಾಖಪಟ್ಟಣ ಅನ್ನು ಅಪ್ಪಳಿಸಿತು. ಇದರಿಂದ 61. ಜನರು ಮೃತರಾಗಿದ್ದರು.21,900 ಕೋಟಿ ರೂ ಗಳು ಹೆಚ್ಚು ಆಸ್ತಿಪಾಸ್ತಿ ನಷ್ಟವಾಗಿತ್ತು.

### 2 ಜಾಲ್- 2010

ಆಂದ್ರಪ್ರದೇಶದ ಮತ್ತು ಒಡಿಶಾಕ್ಕೆ ಅಪ್ಪಳಿಸಿದ ಜಾಲ್ ಚಂಡಮಾರುತವು 54 ಜನರನ್ನು ಬಲಿ ತೆಗೆದುಕೊಂಡಿತು.70 ಸಾವಿರಕ್ಕೂ ಹೆಚ್ಚು ಜನರನ್ನು ಸುರಕ್ಷಿತ ಸ್ಥಳಕ್ಕೆ ಸ್ಥಳಾಂತರಿಸಲಾಯಿತು.3 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆದ ಬೆಳೆಯಲ್ಲವೂ ನಾಶವಾಗಿ ರೈತರು ಕಂಗಾಲಗಿದ್ದರು.

### *ನಿಶಾ- 2008*

ತಮಿಳುನಾಡಿಗೆ ಅಪ್ಪಳಿಸಿದ ನಿಶಾ ಚಂಡಮಾರುತಕ್ಕೆ 180 ಕ್ಕೂ ಹೆಚ್ಚು ಜನರು ಬಲಿಯಾಗಿದ್ದರು.ಈ ಸಮಯದಲ್ಲಿ1280 ಮಿ.ಮೀ.ಗೂ ಅಧಿಕ ಮಳೆ ಸುರಿದು ದಾಖಲೆಯಾಗಿತ್ತು.

### ಫೈಲಿನ್ -2013

2013 ರಲ್ಲಿ ಅಕ್ಟೋಬರ್ ಒಡಿಶಾಕ್ಕೆ ಅಪ್ಪಳಿಸಿದ ಫೈಲಿನ್ ಎಂಬ ಚಂಡಮಾರುತವು ದಸರಾ ಸಂಭ್ರಮವನ್ನೇ ಹಾಳುಮಾಡಿತ್ತು.1,154,725 ಜನರನ್ನು ಬೇರೆಡೆ ಸ್ಥಳಾಂತರಿಸಲಾಗಿತ್ತು.3 ಸಾವಿರ ಕೋಟಿ ರೂ.ಗೂ ಅಧಿಕ ಆಸ್ತಿಪಾಸ್ತಿ ಹಾನಿಯಾಗಿತ್ತು.

### : ನೀಲಂ -2012

2012 ರ ಅಕ್ಟೋಬರ್ 31 ರಂದು ತಮಿಳುನಾಡಿನ ಕರಾವಳಿ ಪ್ರದೇಶದ ಮಹಾಬಲಿಪುರಂ ಅನ್ನು ಅಪ್ಪಳಿಸಿದ ನೀಲಂ ಚಂಡಮಾರುತಕ್ಕೆ12  ಜನರು ಮೃತರಾದರು.3000 ಕ್ಕೂ ಹೆಚ್ಚು ಜನರನ್ನು ಸ್ಥಳಾಂತರಿಸಲಾಯಿತು.100 ಕೋಟಿ ಅಧಿಕ ಮೌಲ್ಯದ ಆಸ್ತಿಗೆ ಹಾನಿಯಾಗಿತ್ತು.

### ರಶ್ಮಿ - 2008

ಅತಿಯಾದ ಮಳೆಯಾಗುವ ಎಚ್ಚರಿಕೆಯನ್ನೂ ನೀಡಿದ್ದರೂ ಈ ಚಂಡಮಾರುತಕ್ಕೆ 15 ಜನರು ಬಲಿಯಾಗಿದ್ದಾರೆ.ಈ ಚಂಡಮಾರುತ ಕಳೆದು ಕೇವಲ15 ದಿನಗಳಲ್ಲಿ ಇದೇ ಪ್ರದೇಶದಲ್ಲಿ "ಖಾಯ್ ಮುಕ್ " ಎಂಬ ಮತ್ತೊಂದು ಚಂಡಮಾರುತ ಅಪ್ಪಳಿಸಿತ್ತು.

••••• ಮಾಹಿತಿ ವೇದಿಕೆ ••••••••

**9 ರಾಜ್ಯಗಳು ಭಾರತದ ಕರಾವಳಿಯನ್ನು ತೀರ ಹೊಂದಿವೆ**

**೧-ಗುಜರಾತ್*   *೨-ಮಹಾರಾಷ್ಟ್ರ* *೩-ಗೋವಾ**

**೪-ಕರ್ನಾಟಕ* *೫-ಕೇರಳ* *೬-ತಮಿಳುನಾಡು**

**೭-ಆಂಧ್ರ* *೮-ಒರಿಸ್ಸಾ* *೯-ಪಶ್ಚಿಮ ಬಂಗಾಳ**

**ಇಂಡಿಯನ್ ಸ್ಟ್ಯಾಂಡರ್ಡ್ ಟೈಮ್ 5 ರಾಜ್ಯಗಳ ಮೂಲಕ ಹಾದು ಹೋಗುತ್ತದೆ**

**೧-ಉತ್ತರ ಪ್ರದೇಶ* *೨-ಮದ್ಯ ಪ್ರದೇಶ* *೩-ಛತ್ತೀಸ್ಗಢ,**

**೪-ಒರಿಸ್ಸಾ,* *೫-ಆಂದ್ರ ಪ್ರದೇಶ**

**ಕರ್ಕಾಟಕ ಸಂಕ್ರಾಂತಿ ವೃತ್ತ  ೮  ರಾಜ್ಯಗಳ ಮೂಲಕ ಹಾದು ಹೋಗುತ್ತದೆ**

**೧-ಗುಜರಾತ್* *೨-ರಾಜಸ್ಥಾನ,**೩-ಮದ್ಯ ಪ್ರದೇಶ**

**೪-ಛತ್ತೀಸ್ಗಢ* *೫-ಜಾರ್ಖಂಡ್* *೭-ಮಿಜೋರಾಮ್.**

**೬-ತ್ರಿಪುರ,**೮-ಪಶ್ಚಿಮ ಬಂಗಾಳ**

**ಉತ್ತರ ಪ್ರದೇಶ, 8 ರಾಜ್ಯಗಳೊಂದಿಗೆ ಗಡಿ ರಾಜ್ಯಗಳನ್ನು ಹೊಂದಿದೆ**

**೧-ಹಿಮಾಚಲ ಪ್ರದೇಶ* *೨-ಹರಿಯಾಣ,* *೩-ರಾಜಸ್ಥಾನ,**

**೪-ಛತ್ತೀಸ್ಗಢ* *೫-ಜಾರ್ಖಂಡ್* *೬-ಬಿಹಾರ**

**೭-ಉತ್ತರಖಂಡ* *೮-ಮದ್ಯ ಪ್ರದೇಶ**

**ನಂತರ ಅಸ್ಸಾಂ,೭ ರಾಜ್ಯಗಳನ್ನು ಗಡಿಹೊಂದಿದೆ**

**ಹರಪ್ಪ ಸಂಸ್ಕೃತಿ/ಸಿಂಧೂ ನಾಗರಿಕತೆಯು ಸೇರಿರುವುದು. - ಲೋಹಯುಗಕ್ಕೆ.**

**ಹೊಸ ಶಿಲಾಯುಗದಲ್ಲಿ ಮೊದಲ ಬಾರಿಗೆ ಶವಸಂಸ್ಕಾರ ಮಾಡುವ ರೂಡಿಗೆ ಬಂತು.**

**ಅಲೆಗ್ಸಾಂಡರ್ ಕನ್ನಿಂಗ್ ಹ್ಯಾಮ್ ನನ್ನು 'ಭಾರತ ಪುರಾತತ್ವದ ಪಿತಾಮಹಾ' ಎನ್ನುವರು**

••••• ಮಾಹಿತಿ ವೇದಿಕೆ ••••••••

# *'ಏಸೂರು ಕೊಟ್ಟರೂ ಈಸೂರು ಕೊಡೆವು'*✍️

( ಈಸೂರು ಬಗ್ಗೆ ಕಿರು ಮಾಹಿತಿ)

*ಭಾರತ ಬ್ರಿಟಿಷರಿಂದ ಸ್ವಾತಂತ್ರ್ಯಗೊಂಡಿದ್ದು 1947ರಲ್ಲಿ. ಆದರೆ ಶಿಕಾರಿಪುರ ತಾಲೂಕಿನ ಈಸೂರು ಗ್ರಾಮ 1942ರಲ್ಲೇ ಸ್ವಾತಂತ್ರ್ಯ ಘೋಷಿಸಿಕೊಂಡಿತು. ಆ ಮೂಲಕ ಇಡೀ ರಾಷ್ಟ್ರದಲ್ಲೇ ಹೋರಾಟದ ಕಿಚ್ಚು ಹೊತ್ತಿಸಿದ್ದು ಈಸೂರು. ಒಂದರ್ಥದಲ್ಲಿ ಸ್ವತಂತ್ರ ಈಸೂರಿಗೆ ಅಮೃತ ಮಹೋತ್ಸವದ ಸಂಭ್ರಮ.1942ರಲ್ಲಿ ಬ್ರಿಟಿಷರೇ ಭಾರತ ಬಿಟ್ಟು ತೊಲಗಿ ಎಂಬ ಕೂಗೆದ್ದಾಗ ಅದಕ್ಕೆ ಮೊದಲು ಸ್ಪಂದಿಸಿದ್ದು ಈಸೂರು ಗ್ರಾಮಸ್ಥರು. 'ಏಸೂರು ಕೊಟ್ಟರೂ ಈಸೂರು ಕೊಡೆವು' ಎಂಬ ಘೋಷಣೆಯೊಂದಿಗೆ ಆ ಪುಟ್ಟ ಗ್ರಾಮದ ಜನರು ಬ್ರಿಟಿಷ್ ಸಾಮ್ರಾಜ್ಯಶಾಹಿಗೇ ಸೆಡ್ಡು ಹೊಡೆದರು. 1942ರವರೆಗೂ ಶಿವಶರಣರ ನಾಡು ಎಂದು ಕರೆಯಿಸಿಕೊಳ್ಳುತ್ತಿದ್ದ ಶಿಕಾರಿಪುರ ತಾಲೂಕು ಈಸೂರು ದಂಗೆ ಬಳಿಕ ಸ್ವಾತಂತ್ರ್ಯ ಹೋರಾಟಗಾರರ ನಾಡಾಗಿ ಗುರುತಿಸಿಕೊಂಡಿತು. ಬ್ರಿಟಿಷ್ ಆಳ್ವಿಕೆಯಲ್ಲಿದ್ದ ಶಾನುಭೋಗರು, ಪಟೇಲರನ್ನು ಇಲ್ಲಿನ ಜನರು ಬಹಿಷ್ಕರಿಸಿದರು. ಸರ್ಕಾರಿ ಕಚೇರಿಗಳನ್ನು ಬಂದ್ ಮಾಡಿ ಕಡತಗಳನ್ನು ಸುಟ್ಟು ಹಾಕಿದರು. ಗ್ರಾಮದ ವೀರಭದ್ರ ಸ್ವಾಮಿ ದೇವಾಲಯದ ಎದುರು ರಾಷ್ಟ್ರಧ್ವಜ ಹಾರಿಸಿದರು. ಆ ಮೂಲಕ ಕೆಂಪುಕೋಟೆಗೂ ಮೊದಲು ಈಸೂರಿನಲ್ಲಿ ರಾಷ್ಟ್ರಧ್ವಜ ಹಾರಿತ್ತು. ಇದು ಇಡೀ ದೇಶದಲ್ಲೇ ಹೊಸ ಸಂಚಲನ ಸೃಷ್ಟಿಸಿತು.ಕಂದಾಯ ಪಾವತಿಗೆ ಗ್ರಾಮಸ್ಥರು ನಿರಾಕರಿಸಿದ ಪರಿಣಾಮ ಅಮಲ್ದಾರ್ ಹಾಗೂ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಈಸೂರಿಗೆ ಬಂದು ರಾಷ್ಟ್ರಧ್ವಜವನ್ನು ಅವಮಾನಿಸಿದರು. ಇದರಿಂದ ರೊಚ್ಚಿಗೆದ್ದ ಗ್ರಾಮಸ್ಥರು ಅಧಿಕಾರಿಗಳನ್ನು ಥಳಿಸಿದರು. ಗೋಲಿಬಾರ್ ಮಾಡಿದರೂ ಅಂಜದೇ ಅಧಿಕಾರಿಗಳ ಮೇಲೆ ಗ್ರಾಮಸ್ಥರು ತಿರುಗಿಬಿದ್ದ ಪರಿಣಾಮ ಅಧಿಕಾರಿಗಳಿಬ್ಬರೂ ಸಾವನ್ನಪ್ಪಿದರು. ಈ ಸುದ್ದಿ ದೇಶವ್ಯಾಪಿ ಕಾಳ್ಗಿಚ್ಚಿನಂತೆ ಹರಡಿತು. ಇಡೀ ಬ್ರಿಟಿಷ್ ಸಾಮ್ರಾಜ್ಯ ಈಸೂರು ದಂಗೆ ಪರಿಣಾಮ ತಲ್ಲಣಿಸಿ ಹೋಯಿತು. ಸ್ವಾತಂತ್ರ್ಯ ಹೋರಾಟಕ್ಕೆ ಮತ್ತಷ್ಟು ವೇಗ ದೊರೆಯಿತು.*

*ಪೊಲೀಸರಿಂದ ಕಿರುಕುಳ*

*ಅಧಿಕಾರಿಗಳಿಬ್ಬರ ಸಾವಿಗೆ ಕಾರಣರಾದ ಗ್ರಾಮಸ್ಥರ ವಿರುದ್ಧ ಶತಾಯಗತಾಯ ಪ್ರತೀಕಾರ ತೆಗೆದುಕೊಳ್ಳಲು ಬ್ರಿಟಿಷ್ ಆಡಳಿತ ಮುಂದಾಯಿತು. ಪೊಲೀಸರು ಊರಿಗೆ ನುಗ್ಗಿ ಸಿಕ್ಕಸಿಕ್ಕವರ ಮೇಲೆ ಹಲ್ಲೆ ನಡೆಸಿದರು. ಲಾಠಿ ಏಟಿಗೆ ಇಲ್ಲಿನ ಕೆಚ್ಚೆದೆಯ ಮಂದಿ ಅಂಜಲೇ ಇಲ್ಲ. ಆದರೂ ಪತ್ನಿ, ತಂದೆ, ತಾಯಿಯ ಒತ್ತಡಕ್ಕೆ ಮಣಿದು ಹಲವರು ಅರಣ್ಯ ಸೇರಿಕೊಂಡರು. ಪುರುಷರು ಕೆಲಕಾಲ ತಲೆ ಮರೆಸಿಕೊಂಡರೆ, ಹೆಂಗಸರು-ಮಕ್ಕಳು ಸಮೀಪದ ಗ್ರಾಮದಲ್ಲಿನ ಬಂಧುಗಳ ಮನೆಗೆ ತೆರಳಿದರು.*

••••• ಮಾಹಿತಿ ವೇದಿಕೆ ••••••••

*ಐವರ ಬಲಿದಾನ*

*ದಂಗೆ ನಡೆಸಿ ಅಧಿಕಾರಿಗಳಿಬ್ಬರ ಸಾವಿಗೆ ಕಾರಣವಾಗಿದ್ದಾರೆ ಎಂದು 24 ಜನರನ್ನು ಬಂಧಿಸಲಾಯಿತು. ಈ ಪೈಕಿ ಐವರಿಗೆ ಗಲ್ಲು ಶಿಕ್ಷೆ ವಿಧಿಸಿದ ನ್ಯಾಯಾಲಯ ಉಳಿದ 19 ಮಂದಿಗೆ ಜೀವಾವಧಿ ಶಿಕ್ಷೆ ವಿಧಿಸಿತು. ಕೆ. ಗುರಪ್ಪ, ಮಲ್ಲಪ್ಪ, ಸೂರ್ಯನಾರಾಯಣಾಚಾರ್, ಬಡಕಳ್ಳಿ ಹಾಲಪ್ಪ, ಶಂಕರಪ್ಪ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಬಲಿದಾನಗೈದರು.*

ವೀರಸೌಧ ನಿರ್ಮಾಣ ಅವಶ್ಯ*

*ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಇಡೀ ದೇಶದ ಗಮನಸೆಳೆದಿದ್ದ ಈಸೂರಿನ ಗತ ಇತಿಹಾಸ ನೆನಪಿಸುವ ಕೆಲಸಕ್ಕೆ ಸರ್ಕಾರ ಮನಸ್ಸು ಮಾಡಬೇಕಿದೆ. ಶಿವಪುರ ಮಾದರಿಯಲ್ಲಿ ಇಲ್ಲಿಯೂ ಹುತಾತ್ಮ ಸೈನಿಕರ ಸ್ಮರಣಾರ್ಥ ವೀರಸೌಧ ಸ್ಮಾರಕ ಭವನ ನಿರ್ಮಾಣವಾಗಬೇಕಿದೆ.*

*ಸಿನಿಮಾ ಆಗ್ತಿದೆ ಈಸೂರು ದಂಗೆ*

ಈಸೂರು ದಂಗೆ ಆಧರಿಸಿ 1975ರಲ್ಲಿ ಆರ್.ಬಸವರಾಜ್ ಎಂಬುವವರು ಸಿನಿಮಾ ನಿರ್ಮಿಸುವ ಪ್ರಯತ್ನ ಮಾಡಿದ್ದರೂ ಅದು ಕಾರ್ಯರೂಪಕ್ಕೆ ಬಂದಿರಲಿಲ್ಲ. ನಂತರದ ದಿನಗಳಲ್ಲಿ ನಿರ್ದೇಶಕ ಗಿರೀಶ್ ಕಾಸರವಳ್ಳಿ ಮುಂತಾದವರು ಈಸೂರಿಗೆ ಭೇಟಿ ನೀಡಿದ್ದರಾದರೂ ಈಸೂರು ದಂಗೆಯನ್ನು ತೆರೆ ಮೇಲೆ ತರುವ ಪ್ರಯತ್ನ ನಡೆದಿರಲಿಲ್ಲ. ಇದೀಗ ಎಚ್.ಟಿ.ಬಳಿಗಾರ್ ಚಿತ್ರ ನಿರ್ಮಿಸಿದ್ದಾರೆ. ಶಿವರಾಜ್ ಕುಮಾರ್ ಚಿತ್ರದಲ್ಲಿ ಪ್ರಮುಖ ಪಾತ್ರದಲ್ಲಿ ಕಾಣಿಸಿಕೊಂಡಿದ್ದಾರೆ. ಸತತ ನಾಲ್ಕು ವರ್ಷಗಳ ಕಾಲ ಈಸೂರು ಹೋರಾಟದ ಬಗ್ಗೆ ಅಧ್ಯಯನ ನಡೆಸಿದ ವೈಭವ್, ಚಿತ್ರಕಥೆ-ಸಂಭಾಷಣೆ ಸಿದ್ಧಪಡಿಸಿ ನಿರ್ದೇಶನ ಮಾಡುತ್ತಿದ್ದಾರೆ. ಮುಂದಿನ ವರ್ಷ ಜನವರಿ ಇಲ್ಲವೇ ಫೆಬ್ರವರಿಯಲ್ಲಿ ಈಸೂರು ದಂಗೆ ತೆರೆ ಮೇಲೆ ಬರಲಿದೆ. 10 ಕೋಟಿ ರೂ. ಬಜೆಟ್‌ನ ಈ ಚಿತ್ರದಲ್ಲಿ ಅನಂತನಾಗ್, ಯೋಗೇಶ್, ಅರುಂಧತಿ ನಾಗ್, ಸುಚೇಂದ್ರ ಪ್ರಸಾದ್, ಗುಂಡ್ಡು ಗೋವಿ ಸತ್ಯ ನಟಿಸಿದ್ದಾರೆ. ರಾಜ್ ಕಿಶೋರ್ ಸಂಗೀತ, ವೇಣು ಛಾಯಾಗ್ರಹಣವಿದೆ.*

••••• ಮಾಹಿತಿ ವೇದಿಕೆ ••••••••

••••• ಮಾಹಿತಿ ವೇದಿಕೆ ••••••••

*ನಮ್ಮ ದೇಶದಲ್ಲೇ ಇದೆ ಪ್ರಪಂಚದ ಎರಡನೇ ಶೀತ ಪ್ರದೇಶ! ಯಾವುದದು ಲೇಖನ ಓದಿ ತಿಳಿಯಿರಿ..*

*ಹೌದು ನಮ್ಮ ಭಾರತದಲ್ಲಿರುವ ಈ ಸ್ಥಳವು ಪ್ರಪಂಚದಲ್ಲಿ ಎರಡನೇ ಅತೀ ಶೀತ ಪ್ರದೇಶ ಎಂದು ಕರೆಯಲ್ಪಡುತ್ತದೆ ಹಾಗು ಈ ಸ್ಥಳ ವಿಭಿನ್ನವಾಗಿದೆ ಇಲ್ಲಿಯ ಕೆಲವು ವೈಶಿಷ್ಟ್ಯತೆಗಳನ್ನು ನಿಮಗೆ ತಿಳಿಸುತ್ತೇವೆ ನೋಡಿ.

ನಮ್ಮ ಭಾರತ ದೇಶದಲ್ಲಿ ಅತಿಶೀತ ಪ್ರದೇಶ ಎಂದರೆ ಜಮ್ಮು ಕಾಶ್ಮೀರ ಎಂಬುದಾಗಿ ಎಲ್ಲರು ಹೇಳುತ್ತಾರೆ ಆದರೆ. ಪ್ರಪಂಚದಲ್ಲೇ ಎರಡನೇ ಅತೀ ಶೀತ ಪ್ರದೇಶ ಎಂದು ಕರೆಯಲ್ಪಡುವ ಈ ಪ್ರದೇಶವು ಕೂಡ ನಮ್ಮ ಭಾರತದಲ್ಲಿಯೇ ಇದೆ. ಭಾರತದ ಹಲವು ರಾಜ್ಯಗಳಲ್ಲಿ ಸಾಮಾನ್ಯವಾಗಿ ತಾಪಮಾನ 0* ಡಿಗ್ರಿ ಸೆಲ್ಸಿಯಸ್ ಇರುತ್ತದೆ. ಆದರೆ ಇಲ್ಲಿ ಮಾತ್ರ ಅತೀ ಶೀತದ ವಾತಾವರಣ ಇರುತ್ತದೆ.*

*ಈ ಸ್ಥಳದಲ್ಲಿ ಜನ ಸಾಮಾನ್ಯರು ವಾಸಿಸುತ್ತಿದ್ದು, ಈ ಸ್ಥಳ ಅಧಿಕೃತ ನಗರ ಅಥವಾ ಪಟ್ಟಣವಾಗಿ ಮಾರ್ಪಟ್ಟಿಲ್ಲ. ಸಬ್ಜೆರೊ ತಾಪಮಾನದಲ್ಲಿ ವಾಸಿಸುವ ಕೆಲವು ಕೋಲ್ಡ್ ಸಿಟಿ ಎನಿಸಿಕೊಳ್ಳುವ ಉದಾ; ಒಮ್ಯೆಕಾನ್ (ಸಖ ರಿಪಬ್ಲಿಕ್, ಈಶಾನ್ಯ ರಷ್ಯಾ). ದ್ರಾಸ್ (ಅಥವಾ ಡ್ರಾಸ್) ಜಮ್ಮು ಮತ್ತು ಕಾಶ್ಮೀರದ ಕಾರ್ಗಿಲ್ ಜಿಲ್ಲೆಯ ಉಪನಗರ ಹವಾಮಾನವನ್ನು ಅನುಭವಿಸುತ್ತದೆ.*

*ಈ ಪ್ರದೇಶದ ತಾಪಮಾನ*

*ಚಳಿಗಾಲದ ಉತ್ತುಂಗದಲ್ಲಿ, ದ್ರಾಸ್ನ ಪಾದರಸವು -45 ಡಿಗ್ರಿ ಸೆಲ್ಷಿಯಸ್ನಷ್ಟು ಕಡಿಮೆಯಾಗುತ್ತದೆ.*

*1995 ರ ಚಳಿಗಾಲದಲ್ಲಿ ದಾಖಲಾದ ಅತಿ ಕಡಿಮೆ ತಾಪಮಾನವು -60 ಡಿಗ್ರಿ ಸೆಲ್ಸಿಯಸ್ ಆಗಿತ್ತು. ಮನುಷ್ಯನ ದೇಹದ ಜೊತೆಗೆ ಮೂಳೆ ತಣ್ಣಗಾಗುವ ತಾಪಮಾನ ಇದ್ದರು ಇಲ್ಲಿ ಸುಮಾರು 1,021 ಜನರು ನೆಲೆಯಾಗಿದ್ದಾರೆ. ಸ್ಥಳೀಯ ಜನಸಂಖ್ಯೆಯು 64 ಪ್ರತಿಶತದಷ್ಟು ಪುರುಷ ಮತ್ತು 36 ಪ್ರತಿಶತ ಸ್ತ್ರೀಯರು ವಾಸಿಸುತ್ತಿದ್ದಾರೆ.*

*ಈ ಕೋಲ್ಡ್ ಈಸ್ಟ್ ಟೌನ್ ಬೆಳಕಿಗೆ ಬಂದಿದ್ದು ಯಾವಾಗ ಗೊತ್ತಾ?*

*1999 ರ ಬೇಸಿಗೆಯಲ್ಲಿ ಜಮ್ಮು ಮತ್ತು ಕಾಶ್ಮೀರಕ್ಕೆ ಪಾಕಿಸ್ತಾನದ ಸೈನ್ಯದ ದಾಳಿಯ ನಂತರ ಈ ಪಟ್ಟಣ ರಾಷ್ಟ್ರೀಯ ಬೆಳಕಿಗೆ ಬಂದಿತು. ಭಾರತೀಯ ಸೇನಾ ಅಂತಿಮವಾಗಿ ಸ್ಥಳದಲ್ಲಿ ಸೆರೆಹಿಡಿದು ಅತಿ ಉತ್ತರದಲ್ಲಿ ತನ್ನ ನೆಲೆಗಳಲ್ಲಿ ಒಂದಾಗಿದೆ.*

*'ಲಡಾಖ್ಗೆ ದಿ ಗೇಟ್ವೇ' ಎಂದೂ ಕರೆಯಲಾಗುವ ದ್ರಾಸ್ 3230 ಮೀ ಅಥವಾ 10,990 ಅಡಿ ಎತ್ತರದಲ್ಲಿದೆ.*

*ದ್ರಾಸ್ನ ಪ್ರಮುಖ ಆಕರ್ಷಣೆಗಳಲ್ಲಿ ಕಾರ್ಗಿಲ್ ಯುದ್ಧ ಸ್ಮಾರಕವು ಭಾರತೀಯ ಸೈನ್ಯದಿಂದ ಬಂದಿದೆ.*

*ಇದು ಶ್ರೀನಗರದ ಹಾದಿಯಲ್ಲಿ ಕಾರ್ಗಿಲ್ ಪಟ್ಟಣದಿಂದ 56 ಕಿಮೀ ದೂರದಲ್ಲಿದೆ.*

*ಗಿಲ್ಗಿಟ್ನ ಅನೇಕ ಜನರನ್ನು ಹೋಲುವ ದ್ರಾಸ್ನ ನಿವಾಸಿಗಳು ಡಾರ್ಡ್ ಎಂದು ಕರೆಯುತ್ತಾರೆ. ಅವರು ಶಿನಾ, ಡಾರ್ಡಿಕ್ ಭಾಷೆಯನ್ನು ಮಾತನಾಡುತ್ತಾರೆ.*

••••• ಮಾಹಿತಿ ವೇದಿಕೆ ••••••••

## ಪ್ರಪಂಚದ ಏಳು ಖಂಡಗಳು

### 1. ಉತ್ತರ ಅಮೇರಿಕಾ

ವಿಶ್ವದ ಏಳು ಖಂಡಗಳಲ್ಲಿ ಮೂರನೇಯ ದೊಡ್ಡ ಖಂಡ . ಗ್ರೇಟ್ ಲೇಕ್ಸ್ ಎನ್ನಲಾಗುವ ಹೊಚ್ಚ ಹೊಸನೀರಿನ ದೊಡ್ಡ ಸರೋವರಗಳು ತುಂಬಿರುವ ಖಂಡ. ಯಾವುದೇ ಖಂಡಕ್ಕೆ ಹೋಲಿಸಿದರೂ ಇಲ್ಲಿರುವ ಕಡಲತೀರದ ಉದ್ದ ಅತ್ಯಂತ ಹೆಚ್ಚು.

* ವಿಸ್ತೀರ್ಣ: 24,235,000ಚ.ಕಿ.ಮೀ.

* ಜನಸಂಖ್ಯೆ: 514 ದಶಲಕ್ಷ

* ಪಶ್ಚಿಮಾರ್ಧಗೋಳದ ಉತ್ತರದಲ್ಲಿರುವ ಈ ಖಂಡ ಅಮೇರಿಕಾ ಸಂಯುಕ್ತ ಸಂಸ್ಥಾನಗಳು, ಕೆನಡಾ, ಮಧ್ಯ ಅಮೇರಿಕಾ ಇವುಗಳನ್ನೊಳಗೊಂಡಿರುತ್ತದೆ.

* ಕೃಷಿ : ಬೇಳೆಕಾಳುಗಳು , ಹೊಗೆಸೊಪ್ಪು, ಆಲೂಗೆಡ್ಡೆ,ಇತ್ಯಾದಿ.

* ಖನಿಜಗಳು: ಕಲ್ಲಿದ್ದಲು, ಪೆಟ್ರೋಲಿಯಂ, ಕಬ್ಬಿಣ, ಮ್ಯಾಂಗನೀಸ್

* ಮುಖ್ಯ ನಗರಗಳು: ನ್ಯೂಯಾರ್ಕ್, ವಾಷಿಂಗ್ಟನ್ ಡಿ.ಸಿ, ಸ್ಯಾನ್ ಫ್ರಾನ್ಸಿಸ್ಕೊ, ಷಿಕಾಗೊ, ಮೆಕ್ಸಿಕೋ, ಮಾಂಟ್ರಿಯಲ್, ಒಟ್ಟಾವ, ಜಮೈಕಾ.

## 2. ದಕ್ಷಿಣ ಅಮೇರಿಕಾ

ಪಶ್ಚಿಮಾರ್ಧಗೋಳದ ದಕ್ಷಿಣ ಖಂಡ, ಅರ್ಜೆಂಟೈನಾ, ಬೊಲಿವಿಯಾ, ಬ್ರೆಜಿಲ್, ಚಿಲಿ, ಕೊಲಂಬಿಯ, ಈಕ್ವೆಡಾರ್, ಪೆರುಗ್ವೆ, ಪೆರು, ಉರುಗ್ವೆ, ವೆನೆಜುವೆಲಾ ಮತ್ತು ಗಯಾನ ಇವುಗಳನ್ನೊಳಗೊಂಡಿರುತ್ತದೆ.

* ವಿಸ್ತೀರ್ಣ: 19,700,00 ಚ.ಕಿ.ಮೀ

* ಜನಸಂಖ್ಯೆ : 371 ದಶಲಕ್ಷ

* ಕೃಷಿ : ಕೋಕೋ, ಕಾಫಿ, ಕಬ್ಬು, ರಬ್ಬರ್ ,

ಬೇಳೆಕಾಳುಗಳು

* ಖನಿಜಗಳು: ಚಿನ್ನ, ಬೆಳ್ಳಿ, ತಾಮ್ರ,ತವರ, ವಜ್ರ,

ನೈಟ್ರೇಟ್ ಗಳು.

* ಮುಖ್ಯ ನಗರಗಳು: ರಿಯೊಡಿ ಜುನೈರೊ,

ಟ್ರಿನಿಡಾಡ್, ಬ್ಯೂನಸ್ ಐರಸ್, ಲಾಪಾಜ್,

ಬೊಗೋಟ

## 3. ಏಷ್ಯಾ

ಭೂಭಾಗದ ಮೂರನೇಯ ಒಂದು ಭಾಗ ಏಷ್ಯಾ. ವಿಶ್ವದಲ್ಲಿಯೇ ಅತ್ಯಂತ ದೊಡ್ಡ ಖಂಡ. ವಿಶ್ವದ ಅರ್ಧಕ್ಕಿಂತ ಹೆಚ್ಚು ಜನಸಂಖ್ಯೆ ಏಷ್ಯಾ ಖಂಡದಲ್ಲಿದೆ. ವಿಶ್ವದ ಅನೇಕ ಉದ್ದವಾದ ನದಿಗಳು ಈ ಖಂಡದಲ್ಲಿವೆ. ಅರೇಬಿಯಾ, ಥಾರ್ ಮರುಭೂಮಿ ಗಳಿವೆ.

* ವಿಸ್ತೀರ್ಣ: 43,999,000 ಚ.ಕಿ.ಮೀ

* ಜನಸಂಖ್ಯೆ : 3830 ದಶಲಕ್ಷ

* ಕೃಷಿ: ಧಾನ್ಯಗಳು, ಬೇಳೆಕಾಳು, ಕಾಫಿ, ಚಹ,

ಎಣ್ಣೆಬೀಜಗಳು

* ಖನಿಜಗಳು: ಚಿನ್ನ, ಕಲ್ಲಿದ್ದಲು, ತೈಲ, ಕಬ್ಬಿಣ,

ಮ್ಯಾಂಗನೀಸ್

* ಮುಖ್ಯ ದೇಶಗಳು : ಭಾರತ, ಇರಾನ್, ಇರಾಕ್,

ಪಾಕಿಸ್ತಾನ, ಶ್ರೀಲಂಕಾ, ಮಯನ್ಮಾರ್, ಚೀನಾ,

ಇಂಡೋನೇಷಿಯಾ, ಮಲೇಷಿಯ

* ಮುಖ್ಯ ನಗರಗಳು : ನವದೆಹಲಿ, ಮುಂಬಯಿ, ಟೋಕಿಯ, ಕೊಲೊಂಬೊ, ಬ್ಯಾಂಕಾಕ್, ತಾಷ್ಕೆಂಟ್,ಸಿಂಗಾಪುರ, ಜಕಾರ್ತ, ಕೌಲಾಲಂಪುರ.

••••• ಮಾಹಿತಿ ವೇದಿಕೆ ••••••••

## 4. ಯುರೋಪ್

* ವಿಸ್ತೀರ್ಣ: 19,700,000 ಚ.ಕಿ.ಮೀ

* ಜನಸಂಖ್ಯೆ: 730.2 ದಶಲಕ್ಷ

* ಕೃಷಿ : ಬೇಳೆಕಾಳುಗಳು, ಹಣ್ಣುಗಳು, ಆಲೂಗೆಡ್ಡೆ ಅರಣ್ಯ ಉತ್ಪನ್ನಗಳು

* ಕೈಗಾರಿಕೆಗಳು: ಮರ, ಕಾಗದ, ಕಬ್ಬಿಣ, ವಿದ್ಯುಚ್ಛಕ್ತಿ ಇತ್ಯಾದಿ

* ಮುಖ್ಯ ದೇಶಗಳು : ಹಂಗೇರಿ, ನಾರ್ವೆ, ಸ್ವೀಡನ್, ಆಸ್ಟ್ರಿಯಾ, ರೊಮೇನಿಯಾ, ಯು.ಕೆ, ಫ್ರಾನ್ಸ್, ಜರ್ಮನಿ, ಪೋಲೆಂಡ್

* ಮುಖ್ಯ ನಗರಗಳು: ಲಂಡನ್, ಬಾನ್, ಬರ್ನ್, ಪ್ಯಾರಿಸ್, ಮ್ಯೂನಿಕ್, ಬರ್ಲಿನ್, ಬುಡಾಪೆಸ್ಟ್, ಮಾಸ್ಕೊ, ಓಸೊ.

## 5. ಆಫ್ರಿಕಾ

ಪ್ರಪಂಚದ ಎರಡನೇ ದೊಡ್ಡ ಖಂಡ

* ವಿಸ್ತೀರ್ಣ: 29,800,000 ಚ.ಕಿ.ಮೀ

* ಜನಸಂಖ್ಯೆ: 847.4ದಶಲಕ್ಷ

* ಕೃಷಿ: ಗೋಧಿ, ಕೋಕೋ, ತಾಳೆ, ನೆಲಗಡಲೆ, ಕಾಫಿ, ಹತ್ತಿ, ಮೆಕ್ಕೆಜೋಳ,

* ಮುಖ್ಯ ನಗರಗಳು: ಕೈರೊ, ಲುಸಾಕ, ಕೇಪ್ ಟೌನ್,      ಮೊಂಬಾಸ, ನೈರೋಬಿ, ಹರಾರೆ, ಪ್ರಿಟೋರಿಯಾ.

••••• ಮಾಹಿತಿ ವೇದಿಕೆ ••••••••

6. ಆಸ್ಟ್ರೇಲಿಯಾ

* ದ್ವೀಪ ಖಂಡ

* ವಿಸ್ತೀರ್ಣ: 7,80,682 ಚ.ಕಿ.ಮೀ

* ಜನಸಂಖ್ಯೆ: 60ದಶಲಕ್ಷ

* ಕೈಗಾರಿಕೆ ಗಳು: ಉಣ್ಣೆ, ಮರ, ಚಿನ್ನ, ಕಬ್ಬಿಣದ

ಆದಿರು

* ಮುಖ್ಯನಗರಗಳು: ಸಿಡ್ನಿ, ಮೆಲ್ಬೋರ್ನ್,

ಅಡಿಲೇಡ್

7. ಅಂಟಾರ್ಟಿಕಾ

ವಿಶ್ವದ ಅತ್ಯಂತ ಎತ್ತರದ ಖಂಡ. ಹಾಳೆಯಿಂದಾವೃತವಾಗಿದೆ. ಅತ್ಯಂತ ಶೀತವಾದ, ಅತಿದೂರವಾದ, ಶೂನ್ಯವಾದ ಖಂಡ. ವಿಶ್ವದ ಬಹುಪಾಲು ಮಂಜು ಅಂಟಾರ್ಟಿಕಾದಲ್ಲಿ ಕಂಡುಬರುತ್ತದೆ

••••• ಮಾಹಿತಿ ವೇದಿಕೆ ••••••••

## ವಲಯ ಮಂಡಳಿಗಳು

ನೆಹರುರವರ ದೂರ ದೃಷ್ಟಿಯಂತೆ 1956 ರ ರಾಜ್ಯ ಪುನರ್ ರಚನಾ ಕಾಯ್ದೆಯ ಮೂರನೇ ಭಾಗದ ಅನ್ವಯ ದೇಶದಲ್ಲಿ ಐದು ವಲಯ ಮಂಡಳಿಗಳನ್ನು ರಚಿಸಲಾಯಿತು

ಪ್ರಸ್ತುತ ಇರುವ ಆರು ಮಂಡಳಿಗಳು.

ಉತ್ತರ ವಲಯ ಮಂಡಳಿ- ಒಳಗೊಂಡ ರಾಜ್ಯಗಳು- ಹರಿಯಾಣ, ಹಿಮಾಲಯ ಪ್ರದೇಶ,ಜಮ್ಮು - ಕಾಶ್ಮೀರ, ರಾಜಸ್ಥಾನ, ಪಂಜಾಬ್, ಕೇಂದ್ರಾಡಳಿತ ಪ್ರದೇಶ ಚಂಡಿಗಡ ಹಾಗೂ ರಾಷ್ಟ್ರೀಯ ರಾಜಧಾನಿ ದೆಹಲಿ.

2) ಕೇಂದ್ರವಲಯ ಮಂಡಳಿ- ಒಳಗೊಂಡ ರಾಜ್ಯಗಳು- ಉತ್ತರ ಪ್ರದೇಶ, ಮಧ್ಯ ಪ್ರದೇಶ, ಛತ್ತೀಸ್ಗಢ, ಮತ್ತು ಉತ್ತರ ಖಂಡ

3) ಪಶ್ಚಿಮ ವಲಯ ಮಂಡಳಿ- ಒಳಗೊಂಡ ರಾಜ್ಯಗಳು- ಮಹಾರಾಷ್ಟ್ರ, ಗುಜರಾತ್, ಗೋವಾ,ದಾದ್ರ ಮತ್ತು ಪುದುಚೇರಿ.

4) ದಕ್ಷಿಣ ವಲಯ ಮಂಡಳಿ- ಒಳಗೊಂಡ ರಾಜ್ಯಗಳು- ಆಂಧ್ರಪ್ರದೇಶದ, ಕರ್ನಾಟಕ, ಕೇರಳ, ತಮಿಳುನಾಡು,ಪುದುಚೇರಿ

5) ಪೂರ್ವ ವಲಯ ಮಂಡಳಿ- ಒಳಗೊಂಡ ರಾಜ್ಯಗಳು- ಬಿಹಾರ, ಪಶ್ಚಿಮ ಬಂಗಾಳ, ಒರಿಸ್ಸ, ಮತ್ತು ಜಾರ್ಖಂಡ್,

6) ಈಶಾನ್ಯ ಮಂಡಳಿ- 1971 ರಲ್ಲಿ ಈಶಾನ್ಯ ಮಂಡಳಿಯನ್ನು ಸಂಸತ್ತಿನ ಕಾಯ್ದೆ ಮೂಲಕ ರಚಿಸಲಾಯಿತು. ಸದಸ್ಯ ರಾಜ್ಯಗಳು- ಅಸ್ಸಾಂ, ಮಣಿಪುರ ,ಮೇಘಾಲಯ, ನಾಗಾಲ್ಯಾಂಡ್,ಮಿಜೊರಾಮ್ ಮತ್ತು ಅರುಣಾಚಲ ಪ್ರದೇಶ

## *ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿ ಚುನಾವಣೆಗೆ ಇರುವ ವ್ಯತ್ಯಾಸ*✍

### ರಾಷ್ಟ್ರಪತಿ✍

* ಲೋಕಸಭಾ ಸದಸ್ಯರಾಗುವ ಎಲ್ಲಾ ಅರ್ಹತೆ ಹೊಂದಿರಬೇಕು.

* ಚುನಾಯಿತ ಸಂಸದರು ,ಶಾಸಕರು ಮಾತ್ರ ಮತ ಚಲಾಯಿಸುತ್ತಾರೆ .

* ನಾಮನಿರ್ದೇಶನಗೊಂಡ ಸದಸ್ಯರು ಮತ ಚಲಾಯಿಸುವಂತಿಲ್ಲ.

* ಚಲಾವಣೆಗೊಂಡ ಸಂಸದರ ಮತಕ್ಕೆ ನಿರ್ದಿಷ್ಟ ಮತಮೌಲ್ಯ ಹಾಗೂ ಆಯಾ ರಾಜ್ಯದ ಜನಸಂಖ್ಯೆ ಆಧಾರದ ಮೇಲೆ ಪ್ರತಿ ಶಾಸಕನ ಮತಮೌಲ್ಯ ನಿಗದಿಯಾಗಿರುತ್ತದೆ.

* ಕನಿಷ್ಟ 50 ಮಂದಿ ಮತದಾರರು ಅನುಮೋದಕರಾಗಿ ಹಾಗೂ ಕನಿಷ್ಠ 50 ಮಂದಿ ಸೂಚಕರಾಗಿ ಅಭ್ಯರ್ಥಿ ಪರವಾಗಿ ಸಹಿ ಮಾಡಬೇಕು.

### ಉಪರಾಷ್ಟ್ರಪತಿ ✍

* ರಾಜ್ಯಸಭೆ ಸದಸ್ಯರಾಗುವ ಎಲ್ಲ ಅರ್ಹತೆ ಹೊಂದಿರಬೇಕು.

* ರಾಜ್ಯಸಭೆ ಮತ್ತು ಲೋಕಸಬೆಯ ಸದಸ್ಯರು ಮಾತ್ರ ಮತ ಹಾಕಬೇಕು.

* ನಾಮನಿರ್ದೇಶನಗೊಂಡ ಸಂಸದರೂ ಮತ ಹಾಕಬಹುದು.

* ಒಬ್ಬ ಸಂಸದನ ಮತಮೌಲ್ಯ ಒಂದು

* ಕನಿಷ್ಠ 20 ಮಂದಿ ಮತದಾರರು ಅನುಮೋದಕರಾಗಿ ,ಕನಿಷ್ಠ 20 ಮತ ಮತದಾರರು ಸೂಚಕರಾಗಿ ಅಭ್ಯರ್ಥಿಪರ ಸಹಿ ಮಾಡಬೇಕು.

••••• ಮಾಹಿತಿ ವೇದಿಕೆ ••••••••

*ವಿಶ್ವದ 2ನೇ ಅತೀ ದೊಡ್ಡ ಡ್ಯಾಮ್ ಸರ್ದಾರ್ ಸರೋವರ ಅಣೆಕಟ್ಟಿನ ಕುರಿತ ಒಂದಷ್ಟು ಕುತೂಹಲಕಾರಿ ಮಾಹಿತಿ*

*1961ರಲ್ಲೇ *ಶಿಲ್ಯಾನ್ಯಾಸಗೊಂಡಿದ್ದ ಡ್ಯಾಮ್ ಯೋಜನೆ ಆರಂಭವಾಗಿದ್ದು ಮಾತ್ರ 1987ರಲ್ಲಿ!*

*ಡ್ಯಾಂ ಉದ್ಘಾಟನೆ ಮಾಡಿದ ಪ್ರಧಾನಿ*

*ಗಾಂಧಿನಗರ: ವಿಶ್ವದ 2ನೇ ಅತೀ ದೊಡ್ಡ ಡ್ಯಾಮ್ ಎಂಬ ಕೀರ್ತಿಗೆ ಭಾಜನವಾಗಿರುವ ಸರ್ದಾರ್ ಸರೋವರ ಡ್ಯಾಮ್ ಭಾನುವಾರ ಉದ್ಘಾಟನೆಯಾಗಿದ್ದು, ಪ್ರಧಾನಿ ನರೇಂದ್ರ ಮೋದಿ ಅಣೆಕಟ್ಟನ್ನು ಲೋಕಾರ್ಪಣೆ ಮಾಡಿದ್ದಾರೆ.*

*ಕಾಂಕ್ರೀಟ್ ಬಳಕೆಯಲ್ಲಿ ವಿಶ್ವದ 2ನೇ ಅತೀ ದೊಡ್ಡ ಡ್ಯಾಮ್ ಎಂಬ ಕೀರ್ತಿಗೆ ಸರ್ದಾರ್ ಸರೋವ ಡ್ಯಾಮ್ ಪಾತ್ರವಾಗಿದ್ದು, ಈ ಬೃಹತ್ ಡ್ಯಾಮ್ ನ ಒಂದಷ್ಟು ಕುತೂಹಲಕಾರಿ ಮಾಹಿತಿ ಇಲ್ಲಿದೆ..*

*1.ಕಾಂಕ್ರೀಟ್ ಬಳಕೆಯಲ್ಲಿ ದೇಶದ ಅತೀ ದೊಡ್ಡ ಡ್ಯಾಮ್ ಆಗಿದ್ದು, ವಿಶ್ವದ 2ನೇ ಅತೀ ದೊಡ್ಡ ಡ್ಯಾಮ್ ಆಗಿದೆ. ಕಾಂಕ್ರೀಟ್ ಬಳಕೆಯಲ್ಲಿ ಅಮೆರಿಕದ ಗ್ರ್ಯಾಂಡ್ ಕೌಲಿ ಡ್ಯಾಮ್ ವಿಶ್ವದ ಮೊದಲ ಅತೀ ದೊಡ್ಡ ಡ್ಯಾಮ್ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.*

*2. ಡ್ಯಾಮ್ 1.2 ಕಿ.ಮೀ ಉದ್ದವಿದ್ದು, 163 ಅಡಿ ಎತ್ತರ ಹೊಂದಿದೆ. ತನ್ನ ಎತ್ತರ ಹಾಗೂ ನೀರಿನ ಶೇಖರಣೆಯಲ್ಲೂ ಸರ್ದಾರ್ ಸರೋವರ ಡ್ಯಾಮ್ ಬೃಹತ್ ಅಣೆಕಟ್ಟು ಎಂಬ ಕೀರ್ತಿಗೆ ಭಾಜನವಾಗಿದೆ.*

*3. ಸರ್ದಾರ್ ಸರೋವರ ಡ್ಯಾಂ ನಲ್ಲಿ ಎರಡು ಪವರ್ ಹೌಸ್ (ವಿದ್ಯುತ್ ಉತ್ಪಾದನಾ ಘಟಕ)ಗಳಿದ್ದು, ಒಂದು 1,200 ಮೆಗಾ ವ್ಯಾಟ್ ಸಾಮರ್ಥ್ಯ ಹಾಗೂ ಮತ್ತೊಂದು 250 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದಿಸುವ ಸಾಮರ್ಥ್ಯವನ್ನು ಹೊಂದಿದೆ. ಇನ್ನು ಉದ್ಘಾಟನೆಗೂ ಮುನ್ನವೇ ಅಂದರೆ ಇಲ್ಲಿಯವರೆದೂ ಈ ಡ್ಯಾಮ್ ನ ಮೂಲಕ ಸುಮಾರು 4,141 ಕೋಟಿ ಯೂನಿಟ್ ವಿದ್ಯುತ್ ಉತ್ಪಾದನೆ ಮಾಡಲಾಗಿದೆ.*

*4.ಡ್ಯಾಂ ನಿರ್ಮಾಣಕ್ಕೆ ಸುಮಾರು 8 ಸಾವಿರ ಕೋಟಿ ವೆಚ್ಚಾಗಿದ್ದು, ಈಗಾಗಲೇ ಈ ಡ್ಯಾಮ್ ನ ತನ್ನ ವಿದ್ಯುತ್ ಉತ್ಪಾದನೆ ಮೂಲಕ 16 ಸಾವಿರ ಕೋಟಿ ಹಣವನ್ನು ಸಂಪಾದನೆ ಮಾಡಿದೆ. ಅಂದರೆ ತನ್ನ ನಿರ್ಮಾಣಕ್ಕಿಂತಲೂ ದುಪ್ಪಟ್ಟು ಹಣ ಈ ಡ್ಯಾಮ್ ನಿಂದ ಉತ್ಪಾದನೆಯಾದ ವಿದ್ಯುತ್ ಮಾರಾಟದಿಂದ ಬಂದ ಹಣ ಸರ್ಕಾರದ ಬೊಕ್ಕಸ ಸೇರಿದೆ.*

*5.ಇನ್ನು ಈ ಡ್ಯಾಮ್ ನಿಂದ ಉತ್ಪಾದನೆಯಾದ ವಿದ್ಯುತ್ ಅನ್ನು ಗುಜರಾತ್, ಮಹಾರಾಷ್ಟ್ರ, ಮಧ್ಯಪ್ರದೇಶ ರಾಜ್ಯಗಳ ಹಂಚಿಕೊಳ್ಳಲಿದ್ದು, ಈ ಪೈಕಿ ಮಹಾರಾಷ್ಟ್ರಕ್ಕೆಶೇ.57ರಷ್ಟು, ಮಧ್ಯ ಪ್ರದೇಶಕ್ಕೆ ಶೇ.27ರಷ್ಟು ಮತ್ತು ಗುಜರಾತ್ ಗೆ ಶೇ.16ರಷ್ಟು ವಿದ್ಯುತ್ ಹಂಚಿಕೆ ಮಾಡಲಾಗುತ್ತದೆ.*

*6. ಈ ಡ್ಯಾಂನಲ್ಲಿ ಒಟ್ಟು 30 ಗೇಟ್ ಗಳಿದ್ದು, ಒಂದೊಂದು ಗೇಟ್ ಗಳು ಬೃಹತ್ ಪ್ರಮಾಣದ ಉಕ್ಕಿನಿಂದ ಮಾಡಲಾಗಿದೆ. ಪ್ರತೀಯೊಂದು ಗೇಟ್ ಕೂಡ 450 ಟನ್ ತೂಕವಿದ್ದು, ಈ ಗೇಟ್ ಗಳನ್ನು ತೆರೆಯಲು ಮತ್ತು ಸ್ಥಗಿತಗೊಳಿಸುವ ಪ್ರಕ್ರಿಯೆಯೇ ಸುಮಾರು 1 ಗಂಟೆ ತಗುಲುತ್ತದೆ.*

*7.ನರ್ಮದಾ ಬಚಾವೋ ಆಂದೋಲನವೂ ಸೇರಿದಂತೆ ವಿವಿಧ ಕಾರಣಗಳಿಂದಾಗಿ ಈ ವರೆಗೂ ಈ ಡ್ಯಾಮ್ ನಲ್ಲಿ ಪೂರ್ಣ ಪ್ರಮಾಣದ ನೀರು ಸಂಗ್ರಹವಾಗಿರಲಿಲ್ಲ. ಇದೀಗ ಪೂರ್ಣ ಪ್ರಮಾಣದ ನೀರು ಸಂಗ್ರಹಕ್ಕೆ ನಿರ್ಧರಿಸಲಾಗಿದ್ದು, ಇದರಿಂದ 18 ಲಕ್ಷ ಹೆಕ್ಟೇರ್ ಕೃಷಿ ಭೂಮಿಗಿ ನೀರುಣಿಸಲು ನೆರವಾಗುತ್ತದೆ. ಈ ಡ್ಯಾಮ್ ನಿಂದ 9 ಸಾವಿರ ಹಳ್ಳಿಗಳು ಪ್ರಯೋಜನ ಪಡೆಯಲಿದೆ.*

••••• ಮಾಹಿತಿ ವೇದಿಕೆ ••••••••

## ವಿಶ್ವ ಅಂಚೆ ದಿನದ ವಿಶೇಷ

*ವಿಸ್ತರಿಸಲ್ಪಟ್ಟ ಅಂಚೆಸೇವೆಗಳು*✍

*2016- ಇಂಡಿಯಾ ಪೋಸ್ಟ್ ಎಟಿಎಂ ಸೇವೆ*   *1863- ರೈಲ್ವೆ ಮೇಲ್ ಸರ್ವೀಸ್ (ಆರ್ ಎಂಎಸ್)*

*1876- ಪಾರ್ಸಲ್ ಪೋಸ್ಟ್ ಯುನಿಟ್ ಸ್ಥಾಪನೆ*   *1879- ಪೋಸ್ಟ್ ಕಾರ್ಡ್ ಪ್ರಾರಂಭ*

*1880- ಮನಿ ಆರ್ಡರ್ ಸೇವೆ ಆರಂಭ1911- ಮೊದಲ ಏರ್‌ಮೇಲ್ ಸೇವೆ ಪ್ರಾರಂಭ (ಅಲಹಾಬಾದ್‌ನಿಂದ ನೈನಿ)*

*1935- ಭಾರತೀಯ ಪೋಸ್ಟಲ್ ಆರ್ಡರ್ ಶುರು*  *1972- ಪಿನ್‌ಕೋಡ್ ಜಾರಿಗೆ*

*1984- ಪೋಸ್ಟಲ್ ಲೈಫ್ ಇನ್ಶೂರೆನ್ಸ್ ಆರಂಭ*  *1985- ಪ್ರತ್ಯೇಕವಾದ ಅಂಚೆ ಮತ್ತು ದೂರವಾಣಿ ಇಲಾಖೆಗಳು*

*1986- ಸ್ಪೀಡ್ ಪೋಸ್ಟ್ ಸೇವೆ*

*1990- ಮುಂಬೈ, ಚೆನ್ನೈನಲ್ಲಿ 2 ಸ್ವಯಂಚಾಲಿತ ಅಂಚೆ ಆವೃತ್ತಿ ಸ್ಥಾಪನ*

*1995- ಗ್ರಾಮೀಣ ಅಂಚೆ ವಿಮ*  *1996- ಮೀಡಿಯಾ ಪೋಸ್ಟಲ್ ಸರ್ವೀಸ್*

*1997- ಬ್ಯುಸಿನೆಸ್ ಪೋಸ್ಟಲ್ ಸರ್ವೀಸ್*   *1998- ಡಾಟಾ ಡಾಕ್ ಮತ್ತು ಎಕ್ಸ್‌ಪ್ರೆಸ್ ಡಾಕ್ ಸೇವೆ*

*2000- ಗ್ರೀಟಿಂಗ್ ಪೋಸ್ಟ್ ಸೇವೆ*   *2001- ಇಲೆಕ್ಟ್ರಾನಿಕ್ ಫಂಡ್ ಟ್ರಾನ್ಸ್‌ಫರ್*

*2002- ಇಂಟರ್ನೆಟ್ ಆಧಾರಿತ ಟ್ರ್ಯಾಕ್ ಮತ್ತು ಟ್ರ್ಯಾಕ್ಸ್ ಸೇವ*   *2003- ಬಿಲ್ ಮೇಲ್ ಸರ್ವೀಸ್*

*2004- ಇ-ಪೋಸ್ಟಲ್ ಸರ್ವೀಸ್    * 2004- ಲಾಜಿಸ್ಟಿಕ್ ಪೋಸ್ಟ್ ಸರ್ವೀಸ್*

••••• ಮಾಹಿತಿ ವೇದಿಕೆ ••••••••

## ಎಚ್ಐವಿ ಮುಕ್ತವಾಗುತ್ತಿದೆ ರಾಜ್ಯ

ರಾಜ್ಯದಲ್ಲಿ ಎಚ್ಐವಿ ಪೀಡಿತರ ಸಂಖ್ಯೆ ದಿನದಿಂದ ದಿನಕ್ಕೆ ಗಣನೀಯ ಪ್ರಮಾಣದಲ್ಲಿ ಇಳಿಕೆಯಾಗುತ್ತಿದೆ. ಇದುವರೆಗೆ ಎಚ್ಐವಿ ಪತ್ತೆಯಲ್ಲಿ ದೇಶದಲ್ಲಿ ಐದನೇ ಸ್ಥಾನದಲ್ಲಿದ್ದ ಕರ್ನಾಟಕ ಇದೀಗ ಎಂಟನೇ ಸ್ಥಾನ ಪಡೆದಿದೆ. ಜನರಲ್ಲಿ ಮೂಡಿದ ಜಾಗೃತಿಯಿಂದಾಗಿ ದೇಶದಲ್ಲೂ ಎಚ್ ಐವಿ ಪತ್ತೆ ಪ್ರಮಾಣ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ.

ದೇಶದ ಅತಿ ಚಿಕ್ಕ ರಾಜ್ಯ ಮಣಿಪುರ ಎಚ್ ಐವಿ ಪತ್ತೆಯಲ್ಲಿ ಅಗ್ರಸ್ಥಾನದಲ್ಲಿದ್ದು, ಎಚ್ಐವಿ ಪತ್ತೆ ಪ್ರಮಾಣ ಶೇ.1.22 ಇದೆ. ಆಂಧ್ರಪ್ರದೇಶದಲ್ಲಿ ಶೇ.0.75, ಮಿಜೋರಾಂ ಶೇ.0.74, ನಾಗಾಲ್ಯಾಂಡ್ ಶೇ.0.73, ಮಹಾರಾಷ್ಟ್ರ ಶೇ. 0.45, ಕರ್ನಾಟಕದಲ್ಲಿ ಶೇ. 0.36 ಇದೆ.

ರಾಜ್ಯದಲ್ಲಿ ಕಳೆದ ವರ್ಷ 9,18,149 ಮಂದಿ ತಪಾಸಣೆ ಗೊಳಗಾಗಿದ್ದು 10,299 ಮಂದಿಯಲ್ಲಿ ರೋಗ ಕಾಣಿಸಿಕೊಂಡಿತ್ತು. ಈ ವರ್ಷ 19,37,220 ಮಂದಿ ತಪಾಸಣೆಗೊಳಗಾಗಿದ್ದು 19,948 ಮಂದಿಯಲ್ಲಿ ರೋಗ ಪತ್ತೆಯಾಗಿದೆ.

### ಹದಿಹರೆಯದವರರಲ್ಲೇ ಅಧಿಕ

ಅಮೆರಿಕಾ, ಆಫ್ರಿಕಾ, ಇಂಗ್ಲೆಂಡ್ ಇತ್ಯಾದಿ ದೇಶಗಳಲ್ಲಿ ಹದಿಹರೆಯದವರಲ್ಲಿ ಎಚ್ ಐವಿ ಪತ್ತೆ ಪ್ರಮಾಣ ಹೆಚ್ಚುತ್ತಿರುವುದು ಆತಂಕಕಾರಿ ಬೆಳವಣಿಗೆ. ಭಾರತದಲ್ಲಿ ಈ ಪ್ರಮಾಣ ಅತ್ಯಲ್ಪವಾಗಿರುವುದು ತಿಳಿದು ಬಂದಿದೆ. ರಾಜ್ಯದಲ್ಲಿ 25 ರಿಂದ 30 ವರ್ಷ ಮೇಲ್ಪಟ್ಟವರೇ ಎಚ್ಐವಿ ಪರೀಕ್ಷೆ ಮಾಡಿಸಿಕೊಳ್ಳುವುದರಿಂದ ಟೀನೇಜರ್ಸ್‌ಗಳಲ್ಲಿ ಸೋಂಕು ಪತ್ತೆ ಪ್ರಮಾಣ ಕಡಿಮೆ ಇರುವುದಾಗಿ ಏಡ್ಸ್ ನಿಯಂತ್ರಣ ಸೊಸೈಟಿಯ ಹಿರಿಯ ಅಧಿಕಾರಿ ಮಾಹಿತಿ ನೀಡಿದ್ದಾರೆ.

**( ಮಾಹಿತಿಗಾಗಿ ತಪ್ಪು ತಿಳಿಯಬೇಡಿ)**

## 2016-17ನೇ ಸಾಲಿನಲ್ಲಿ ಜಿಲ್ಲಾವಾರು ಪತ್ತೆಯಾಗಿರುವ ಎಚ್‌ಐವಿ ಸೋಂಕು ಪ್ರಕರಣಗಳು

# ಬಾಗಲಕೋಟೆ – 1616 # ಬೆಂಗಳೂರು ಗ್ರಾಮಾಂತರ – 258

# ಬೆಂಗಳೂರು ನಗರ – 3104?ಬೆಳಗಾವಿ – 2262

# ಬಳ್ಳಾರಿ – 873 #ಬೀದರ್ – 416

#ವಿಜಯಪುರ – 1170 # ಚಾಮರಾಜನಗರ – 265

# ಚಿಕ್ಕಬಳ್ಳಾಪುರ – 335 # ಚಿಕ್ಕಮಗಳೂರು – 265

# ಚಿತ್ರದುರ್ಗ – 491 # ಮಂಗಳೂರು – 637

# ದಾವಣಗೆರೆ – 598 # ಧಾರವಾಡ – 746

# ಗದಗ – 380 # ಕಲಬುರಗಿ – 689

#ಹಾಸನ – 493 # ಹಾವೇರಿ – 407

# ಕೊಡಗು – 158 # ಕೋಲಾರ – 450

# ಕೊಪ್ಪಳ – 690 # ಮಂಡ್ಯ – 501

# ಮೈಸೂರು – 980 # ರಾಯಚೂರು – 856

# ರಾಮನಗರ – 157 # ಶಿವಮೊಗ್ಗ – 350

# ತುಮಕೂರು – 809 # ಉಡುಪಿ – 381

# ಉತ್ತರ ಕನ್ನಡ – 178 # ಯಾದಗಿರಿ – 335

( ಮಾಹಿತಿಗಾಗಿ ತಪ್ಪು ತಿಳಿಯಬೇಡಿ)

## ಮಾನವ ಹಕ್ಕುಗಳ ಆಯೋಗದ ಬಗ್ಗೆ ಕಿರು ಮಾಹಿತಿ

ಸಮಾನತೆ, ಸಹಬಾಳ್ವೆ, ಸಮಾನ ಸುಖ-ಸಂತೋಷ ಸಾರುವ 'ಸರ್ವೆಜನಾಃ ಸುಖಿನೋಭವಂತು' ಎನ್ನುವುದನ್ನು ನಾವಿಂದು ಮರೆತಿದ್ದೇವೆ. ಇದರ ಪರಿಣಾಮ ಅತ್ಯಾಚಾರ, ಅನಾಚಾರ ಪ್ರಕರಣಗಳು ಹೆಚ್ಚುತ್ತಿವೆ. ಹೀಗಾಗಿ ಮಾನವ ಹಕ್ಕುಗಳ ಅವಶ್ಯಕತೆ ಹಿಂದೆಂದಿಗಿಂತ ಹೆಚ್ಚಿದೆ. ಮಾನವೀಯ ಮೌಲ್ಯ, ಮಾನವ ಹಕ್ಕುಗಳನ್ನು ಬಳಸಿಕೊಳ್ಳುವ ರೀತಿ-ನೀತಿಯ ಅರಿವೂ ಹೆಚ್ಚಬೇಕಿದೆ. ಈ ನಿಟ್ಟಿನಲ್ಲಿ ಹಲವರು ಜಾಗೃತಿ ಮೂಡಿಸುತ್ತಿದ್ದಾರೆ. ಇಂತಹವರಲ್ಲಿ ಆಯ್ದ ಐವರು ಸಾಧಕರ ಯಶೋಗಾಥೆ ಇಲ್ಲಿದೆ.

### ದಿನಾಚರಣೆ ಹಿನ್ನೆಲೆ

ಪ್ರತಿ ವರ್ಷದ ಡಿಸೆಂಬರ್ 10ನ್ನು ಮಾನವ ಹಕ್ಕು ದಿನವನ್ನಾಗಿ ಆಚರಿಸಲು ವಿಶ್ವಸಂಸ್ಥೆ 1948ರಲ್ಲಿ ನಿರ್ಧರಿಸಿತು. 1950ರ ಡಿಸೆಂಬರ್ 4ರಂದು ನಡೆದ ವಿಶ್ವಸಂಸ್ಥೆ ಅಧಿವೇಶನ ಈ ನಿರ್ಧಾರಕ್ಕೆ ಅಧಿಕೃತ ಮುದ್ರೆ ಒತ್ತಿತು. ಪ್ರತಿ ವರ್ಷ ಈ ದಿನದಂದು ಮಾನವ ಹಕ್ಕುಗಳ ಬಗ್ಗೆ ಅರಿವು ಮೂಡಿಸುವ, ಸಮಾಜದ ದಮನಿತರ ರಕ್ಷಣೆಗೆ ಕಟಿಬದ್ಧರಾಗುವ ಹಲವು ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ.

**ಹಕ್ಕುಗಳ ರಕ್ಷಣೆ ಹೇಗೆ?**: ಈ ಜಗತ್ತಿನಲ್ಲಿ ಮಾನವಸಹಿತ ಎಲ್ಲ ಜೀವಿಗಳಿಗೂ ಬದುಕುವ ಹಕ್ಕು (Right to Live) ಇದೆ. ತಾನೂ ಬದುಕಬೇಕು ಇತರರಿಗೂ ಬದುಕುವ ಅವಕಾಶ ನೀಡಬೇಕು ಎಂಬುದನ್ನು ಪಾಲಿಸುವುದು ಯಾವ ಸಾತ್ವಿಕನಿಗೂ ಕಷ್ಟವಾಗದು. ಇತರರಿಗೆ ಏನಾದರೂ ಚಿಂತೆಯಿಲ್ಲ, ತಾನು ಶ್ರೀಮಂತನಾಗಬೇಕು, ಇತರರದೆಲ್ಲ ತನಗೇ ಸೇರಿದ್ದು ಎಂಬ ಮನೋಭಾವ ಮೈಗೂಡಿಸಿಕೊಂಡವರೇ ಅಧಿಕ ಸಂಖ್ಯೆಯಲ್ಲಿರುವಾಗ ಮಾನವ ಹಕ್ಕುಗಳ ರಕ್ಷಣೆ ಹೇಗೆ ಸಾಧ್ಯ? ಬದುಕುವುದು ಎಂದರೆ ಕೇವಲ ಅಸ್ತಿತ್ವದಲ್ಲಿರುವುದಲ್ಲ, ಘನತೆಯಿಂದ ಬದುಕುವುದು (living with dignity) ಎಂಬುದನ್ನು ಭಾರತದ ಸುಪ್ರೀಂಕೋರ್ಟ್ ಸಹಿತ ಹಲವು ರಾಷ್ಟ್ರಗಳ ಉನ್ನತ ನ್ಯಾಯಾಲಯಗಳು ಹೇಳಿವೆ.ಹಾಗಾಗಿ ಘನತೆಯ ಜೀವನ ಸಾಗಿಸಲು ಅಗತ್ಯವಿರುವ ಆಹಾರ, ಆರೋಗ್ಯ, ಸೂರು, ಶೋಷಣೆಯಿಂದ ರಕ್ಷಣೆ ಇತ್ಯಾದಿಗಳನ್ನೆಲ್ಲ ಮಾನವ ಹಕ್ಕುಗಳ ಪಟ್ಟಿಯಲ್ಲಿ ಸೇರಿಸಲಾಗಿದೆ. ಹೆಚ್ಚಿನೆಲ್ಲ ದೇಶಗಳ ಸಂವಿಧಾನಗಳಲ್ಲಿ ಮೂಲಭೂತ ಹಕ್ಕುಗಳ ರೂಪದಲ್ಲಿ ನಾಗರಿಕರಿಗೆ ಇವನ್ನೆಲ್ಲ ನೀಡಲಾಗಿದೆ.

**ಘೋರ ಕೃತ್ಯಗಳು**: ಎರಡನೇ ಮಹಾಯುದ್ಧದ ಸಮಯದಲ್ಲಿ 1 ಲಕ್ಷಕ್ಕೂ ಅಧಿಕ ಜರ್ಮನ್ ಸೈನಿಕರನ್ನು ಬಂಧಿಗಳನ್ನಾಗಿ ಮಾಡಿದ ರಷ್ಯನ್ ನಾಯಕರು ಯುದ್ಧಾನಂತರ ಬಿಡುಗಡೆ ಮಾಡಿದ್ದು ಕೇವಲ 6,000 ಸೈನಿಕರನ್ನು! ಯುದ್ಧಬಂಧಿತರನ್ನು ಹಿಂಸಿಸಬಾರದು ಎಂಬ ನಿಯಮ ರೂಪಿಸಿದ ಜಿನೇವಾ ಒಪ್ಪಂದಕ್ಕೆ ಸಹಿ ಮಾಡಿದ ನಂತರವೂ ಯುದ್ಧಕಾಲದ ನಾಯಕ ಐಸೆನ್ ಹೋವರ್ ನೇತೃತ್ವದಲ್ಲಿ 'ಮೋರ್ಗನ್ ಥಾವ್ರೋ' ಎಂಬ ಯೋಜನೆಯನ್ನು ಜಾರಿಗೊಳಿಸಲಾಯಿತು. ಇನ್ನೊಂದು ದೇಶದ ಮೇಲೆ ದಾಳಿಮಾಡುವ ಜರ್ಮನ್ನರ ಯುದ್ಧ ಸಾಮರ್ಥ್ಯವನ್ನೇ ಮೊಟಕುಗೊಳಿಸಲು ರೂಪಿತವಾದ ಈ ಯೋಜನೆಯಲ್ಲಿ ಯುದ್ಧಬಂಧಿತರನ್ನು ಮುಗಿಸುವ ಕಾರ್ಯ ಅಮೆರಿಕದ ಜನರಲ್ ಲೂಸಿಯಸ್ ನೇತೃತ್ವದಲ್ಲಿ ಯಶಸ್ವಿಯಾಗಿ ನಡೆಯಿತು.

ಜರ್ಮನ್, ರಷ್ಯಾ ಚೀನಾ, ಜಪಾನ್‌ಗಳಲ್ಲಿ ಯುದ್ಧಗಳ ನೆಪದಲ್ಲಿ ಮಾನವಹಕ್ಕುಗಳ ದಮನ ನಡೆದರೆ ಭಾರತದಲ್ಲಿ ಸಂಪ್ರದಾಯ ಹಾಗೂ ಮೂಢನಂಬಿಕೆಗಳೇ ದುರ್ಬಲರ ಹಾಗೂ ಅಸಹಾಯಕರ ದಮನಕ್ಕೆ ಕಾರಣವಾದವು. ಸತಿಪದ್ಧತಿಯನ್ನು ಪಾತಿವ್ರತ್ಯ ಪಾಲನೆಯ ಹೆಸರಿನಲ್ಲಿ ವೈಭವೀಕರಿಸಲಾಗುತ್ತಿತ್ತು. ಬಾಲ್ಯವಿವಾಹ ಪದ್ಧತಿ ನಿಷೇಧಿಸಲಾಗಿದ್ದರೂ ರಾಜಸ್ಥಾನ, ಹರಿಯಾಣ, ಮಹಾರಾಷ್ಟ್ರ ಮುಂತಾದೆಡೆ ಈ ಮಾನವ ಹಕ್ಕು ವಿರೋಧಿ ಕಾರ್ಯ ಈಗಲೂ ನಡೆಯುತ್ತಿದೆ.

**ಮೂಡುತ್ತಿದೆ ಅರಿವು**: ಸಾಮಾಜಿಕ ಸಂಘಟನೆಗಳು, ಸ್ವಯಂಸೇವಾ ಸಂಸ್ಥೆಗಳು ಮಾನವ ಹಕ್ಕುಗಳ ರಕ್ಷಣೆ ನಿಟ್ಟಿನಲ್ಲಿ ನಿರಂತರ ಅರಿವು, ಜಾಗೃತಿ ಮೂಡಿಸುತ್ತಿರುವ ಪರಿಣಾಮ ಮಾನವ ಹಕ್ಕುಗಳ ಉಲ್ಲಂಘನೆ ಪ್ರಮಾಣ ಭಾರತದಲ್ಲಿ ಕಡಿಮೆಯಾಗುತ್ತಿದೆಯಾದರೂ, ಗ್ರಾಮೀಣ ಭಾಗದಲ್ಲಿ ಪರಿಸ್ಥಿತಿ ಇನ್ನಷ್ಟು ಸುಧಾರಿಸಬೇಕಿದೆ.

**ಯಾರಿವರು ನಿಮಗೆ ಗೊತ್ತೇ?**

* ಖ್ಯಾತ ಜರ್ಮನ್ ಲೇಖಕಿ ಐಸೋಲ್ಡ್ ಕರ್ಜ್ (1853-1944). ಸಣ್ಣಕಥೆಗಳನ್ನೂ ಭಾವಗೀತೆಗಳನ್ನೂ ಕಾದಂಬರಿಗಳನ್ನೂ ಬರೆದಿದ್ದಾರೆ. ಪ್ರಸಿದ್ಧ ಕಾದಂಬರಿಕಾರ ಹರ್ಮನ್ ಕರ್ಜ್ ಈಕೆಯ ತಂದೆ. ಬಾಲ್ಯದಿಂದಲೂ ತಾಯಿಯ ಪ್ರಭಾವ ಹಾಗೂ ಶಿಕ್ಷಣದಲ್ಲಿ ಬೆಳೆದದ್ದರಿಂದ ಸಾಹಿತ್ಯದಲ್ಲಿ ಅಭಿರುಚಿಯುಂಟಾಯಿತು. ಚಿಕ್ಕವಯಸ್ಸಿನಲ್ಲೇ ತಂದೆಯನ್ನು ಕಳೆದುಕೊಂಡಿದ್ದರಿಂದ ಸ್ವಾವಲಂಬಿಯಾಗಿ ದುಡಿಯಬೇಕಾಯಿತು. ಮ್ಯೂನಿಚ್‌ನಲ್ಲಿ ಭಾಷೆ ಕಲಿಸುವ ಶಿಕ್ಷಕಿಯಾದರು. ಆಗ ಬರೆದ ಮೊದಲ ಸಣ್ಣಕಥೆ ಪ್ರಸಿದ್ಧವಾಯಿತು. ಗೆದಿಷ್ಟೆ (1899), ನ್ಯೂ ಗೆದಿಷ್ಟೆ (1905) – ಇವು ಇವರ ಪ್ರಕಟಿತ

ಕವನಸಂಕಲನಗಳು. ಜರ್ಮನ್ ಭಾವಗೀತೆಗಳಲ್ಲಿ ಇವರ ಕವಿತೆಗಳಿಗೆ ವಿಶಿಷ್ಟ ಸ್ಥಾನವಿದೆ.

••••• ಮಾಹಿತಿ ವೇದಿಕೆ ••••••••

## ಭಾರತದಲ್ಲಿ ಆಧುನಿಕ ಗುಲಾಮಗಿರಿಯ ರೂಪಗಳು

'ಭಾರತದಲ್ಲಿ ಸುಮಾರು 1.83 ಕೋಟಿ ಜನರು ಆಧುನಿಕ ಗುಲಾಮಗಿರಿಗೆ ಸಿಲುಕಿ ನರಳುತ್ತಿದ್ದಾರೆ' ಎಂದು ಜಾಗತಿಕ ಗುಲಾಮಗಿರಿ ಸೂಚ್ಯಂಕ ವರದಿಯಲ್ಲಿ ಉಲ್ಲೇಖಿಸಲಾಗಿದೆ.ವಿಶ್ವದಲ್ಲಿ ಅತಿ ಹೆಚ್ಚು ಜನರು ಗುಲಾಮಗಿರಿಗೆ ಸಿಲುಕಿರುವ ದೇಶಗಳ ಪಟ್ಟಿಯಲ್ಲಿ ಭಾರತ ನಾಲ್ಕನೇ ಸ್ಥಾನದಲ್ಲಿದೆ. ಉತ್ತರ ಕೊರಿಯ, ಉಜ್ಬೆಕಿಸ್ತಾನ ಮತ್ತು ಕಾಂಬೋಡಿಯ ಕ್ರಮವಾಗಿ ಒಂದು, ಎರಡು ಮತ್ತು ಮೂರನೇ ಸ್ಥಾನದಲ್ಲಿವೆ.ಆಸ್ಟ್ರೇಲಿಯದ ವಾಕ್ ಫ್ರೀ ಫೌಂಡೇಷನ್, ವಿಶ್ವಸಂಸ್ಥೆಯ ಅಂತರರಾಷ್ಟ್ರೀಯ ಕಾರ್ಮಿಕ ಆಯೋಗವು ಜಂಟಿಯಾಗಿ ನಡೆಸಿದ ಸಮೀಕ್ಷೆಯಲ್ಲಿ ಈ ಅಂಶ ಪತ್ತೆಯಾಗಿದೆ.ವಿಶ್ವದ 150 ದೇಶಗಳು ಗುಲಾಮಗಿರಿಯನ್ನು ಸಂಪೂರ್ಣವಾಗಿ ನಿಷೇಧಿಸಿವೆ. ಆದರೂ ಬಹುತೇಕ ಎಲ್ಲಾ ರಾಷ್ಟ್ರಗಳಲ್ಲೂ ಗುಲಾಮಗಿರಿ ಅಸ್ತಿತ್ವದಲ್ಲಿದೆ. ಒಟ್ಟಾರೆ ವಿಶ್ವದಾದ್ಯಂತ 4.58 ಕೋಟಿ ಜನರು ಆಧುನಿಕ ಗುಲಾಮಗಿರಿಗೆ ಸಿಲುಕಿದ್ದಾರೆ ಎಂದು ಸಮೀಕ್ಷೆಯ ವರದಿಯಲ್ಲಿ ಉಲ್ಲೇಖಿಸಲಾಗಿದೆ.ಜೀತಪದ್ಧತಿ ನಿರ್ಮೂಲನಾ ಕಾಯ್ದೆ, ಕಾರ್ಮಿಕ ಕಾನೂನು ಇದ್ದರೂ ಭಾರತದಲ್ಲಿ ಗುಲಾಮಗಿರಿ ಮತ್ತು ಜೀತಪದ್ಧತಿಯ ವಿರುದ್ಧ ದಾಖಲಾಗುವ ಪ್ರಕರಣಗಳ ಸಂಖ್ಯೆ ತೀರಾ ಕಡಿಮೆ.ಬಹುತೇಕ ಪ್ರಕರಣಗಳಲ್ಲಿ ಆರೋಪಿಗಳು ಸಂತ್ರಸ್ತರನ್ನು ಬೆದರಿಸುವುದರಿಂದ ಮತ್ತು ಸೂಕ್ತ ಸಾಕ್ಷ್ಯಾಧಾರ ದೊರೆಯದೇ ಇರುವುದರಿಂದ ತಪ್ಪಿತಸ್ಥರಿಗೆ ಶಿಕ್ಷೆಯಾಗುವುದಿಲ್ಲ ಎಂದು ವರದಿ ಹೇಳಿದೆ.ಆಧುನಿಕ ಗುಲಾಮಗಿರಿಗೆ ವಿಶ್ವದಲ್ಲಿ ಅತಿಹೆಚ್ಚು ಜನರು ಗುರಿಯಾಗಿರುವ ದೇಶಗಳ ಪಟ್ಟಿಯಲ್ಲಿ ಭಾರತ ನಾಲ್ಕನೇ ಸ್ಥಾನದಲ್ಲಿದೆ

* ಭಾರತದಲ್ಲಿ ಇದ್ದಾರೆಂದು ಅಂದಾಜಿಸಲಾದ ಆಧುನಿಕ ಗುಲಾಮರ ಸಂಖ್ಯೆ 1.83 ಕೋಟಿ

* ದೇಶದ ಜನಸಂಖ್ಯೆಯಲ್ಲಿ ಆಧುನಿಕ ಗುಲಾಮರ ಪ್ರಮಾಣ 1.40%

* ವಿಶ್ವದಾದ್ಯಂತ ಇದ್ದಾರೆಂದು ಅಂದಾಜಿಸಲಾದ ಆಧುನಿಕ ಗುಲಾಮರ ಸಂಖ್ಯೆ 4.58 ಕೋಟಿ

* ವಿಶ್ವದ ಒಟ್ಟು ಆಧುನಿಕ ಗುಲಾಮರಲ್ಲಿ ಅರ್ಧಕ್ಕಿಂತಲೂ ಹೆಚ್ಚು ಭಾರತ, ಚೀನಾ, ಪಾಕಿಸ್ತಾನ, ಬಾಂಗ್ಲಾದೇಶ ಮತ್ತು ಉಜ್ಬೆಕಿಸ್ತಾನಗಳಲ್ಲಿ ಇದ್ದಾರೆ

## ಹೆಚ್ಚು ಗುಲಾಮರ ದೇಶಗಳು

ದೇಶದ ಜನಸಂಖ್ಯೆಯ ಪ್ರಮಾಣದಲ್ಲಿ ಹೆಚ್ಚು ಗುಲಾಮರನ್ನು ಹೊಂದಿರುವ ದೇಶಗಳು

1. ಉತ್ತರ ಕೊರಿಯ 2. ಉಜ್ಬೆಕಿಸ್ತಾನ 3. ಕಾಂಬೋಡಿಯ

### ಜೀತಪದ್ಧತಿ

* ಅತ್ಯಂತ ಹಳೆಯ ಮತ್ತು ನಿಷೇಧವಾಗಿದ್ದರೂ ಅಸ್ತಿತ್ವದಲ್ಲಿರುವ ಪದ್ಧತಿ

* ಕುಟುಂಬದ ಹಿರಿಯರು ಮಾಡಿದ ಸಾಲವನ್ನು ತೀರಿಸುವ ಸಲುವಾಗಿ ಸಂಬಳವಿಲ್ಲದೇ ದುಡಿಮೆ

* ಸಾಲ ಮಾಡಿದವರ ಮಕ್ಕಳು ಬಲಿಯಾಗುವುದು ಹೆಚ್ಚು. ಮಕ್ಕಳು ಇಲ್ಲದಿದ್ದರೆ ಪತಿಯ ಪರವಾಗಿ ಪತ್ನಿ ದುಡಿಯಬೇಕಾಗುತ್ತದೆ

* ಮನೆಗೆಲಸ, ಹೊಲ–ಗದ್ದೆ, ಕಲ್ಲು ಗಣಿಗಾರಿಕೆ, ಮೀನುಗಾರಿಕೆ ಮತ್ತು ಇಟ್ಟಿಗೆ ತಯಾರಿಕಾ ಘಟಕಗಳಲ್ಲಿ ಇಂತಹ ಜೀತದಾಳುಗಳನ್ನು ಕಾಣಬಹುದು

### ಮನೆಗೆಲಸದಾಳು

* ಇದೊಂದು ಅಸಂಘಟಿತ ವಲಯ

* ಮಹಿಳೆಯರು ಮತ್ತು ಮಕ್ಕಳು ಕಂಡು ಬರುತ್ತಾರೆ

* ಕಡಿಮೆ ಸಂಬಳ ಮತ್ತು ಹೆಚ್ಚು ಅವಧಿಯ ದುಡಿಮೆ

* ಮಕ್ಕಳನ್ನು ಖರೀದಿಸಿ ತಂದು ಮನೆಗೆಲಸಕ್ಕೆ ಇರಿಸಿಕೊಳ್ಳುವುದು ರೂಢಿಯಲ್ಲಿದೆ

* ಹಲ್ಲೆ, ನಿಂದನೆ, ಲೈಂಗಿಕ ದೌರ್ಜನ್ಯ ಮತ್ತು ಅತ್ಯಾಚಾರಗಳು ನಡೆಯುವ ಅಪಾಯ ಹೆಚ್ಚು

### ಒತ್ತಾಯದ ಬಿಕ್ಷಾಟನೆ

* ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ವ್ಯಾಪಕವಾಗಿದೆ

* ವೃದ್ಧರು ಮತ್ತು ಮಕ್ಕಳನ್ನು ಬೆದರಿಕೆ ಒಡ್ಡಿ ಬಿಕ್ಷಾಟನೆಗೆ ದೂಡಲಾಗುತ್ತದೆ

* ಬಿಕ್ಷೆಯಲ್ಲಿ ಸಂಗ್ರಹವಾದ ಹಣವನ್ನು ಯಾವುದೋ ಒಬ್ಬ ವ್ಯಕ್ತಿ/ಗುಂಪುಗಳಿಗೆ ನೀಡಬೇಕು

* ಸಂತ್ರಸ್ತರಿಗೆ ಊಟವನ್ನು ಒದಗಿಸುವ ಕೆಲಸವನ್ನಷ್ಟೇ ಆ ವ್ಯಕ್ತಿ/ಗುಂಪುಗಳು ಮಾಡುತ್ತವೆ

* ಮನೆಬಿಟ್ಟು ಬಂದ ಮಕ್ಕಳು, ಮಕ್ಕಳು ಹೊರದಬ್ಬಿದ ವೃದ್ಧರು ಈ ದಂದೆಗೆ ಬಲಿಯಾಗುವುದು ಹೆಚ್ಚು

## ವೇಶ್ಯಾವಾಟಿಕೆ

* ಭಾರತದಾದ್ಯಂತ ಈ ದಂದೆ ವ್ಯಾಪಕವಾಗಿದೆ

* ಬಾಲಕಿಯರು–ಯುವತಿಯರು– ಮಹಿಳೆಯರನ್ನು ವೇಶ್ಯಾವಾಟಿಕೆ ದಂದೆಯಲ್ಲಿರುವವರಿಗೆ ಮಾರಾಟ ಮಾಡುವುದು ಸಾಮಾನ್ಯವಾಗಿದೆ

* ಪ್ರೀತಿ–ಮದುವೆಯ ಮೂಲಕ ವಂಚಿಸಿ ಯುವತಿಯರನ್ನು ದಂದೆಗೆ ದೂಡಲಾಗುತ್ತದೆ

* ದಿನಗಟ್ಟಲೆ ಊಟ ನೀಡದೆ, ಕೂಡಿ ಹಾಕಿ ಗ್ರಾಹಕರ ಜತೆ ಲೈಂಗಿಕತೆಗೆ ಸಹಕರಿಸುವಂತೆ ಮಾಡಲಾಗುತ್ತದೆ

## ಬಲವಂತದ ಮದುವೆ

* 18 ವರ್ಷ ತುಂಬದ ಬಾಲಕಿಯರಿಗೆ ಬಲವಂತವಾಗಿ ಮದುವೆ ಮಾಡಲಾಗುತ್ತದೆ

* ಬಾಲಕಿಯರ ಪೋಷಕರಿಗೆ ಹಣ ನೀಡಲಾಗಿರುತ್ತದೆ, ಆದರೆ ಬಾಲಕಿಯರನ್ನು ಖರೀದಿಸಲಾಗಿದೆ ಎಂಬುದು ಅವರಿಗೆ ತಿಳಿಯದಂತೆ ವಂಚಿಸಲಾಗಿರುತ್ತದೆ

* ಗ್ರಾಮೀಣ ಭಾಗದ ಬಾಲಕಿಯರನ್ನು ನಗರವಾಸಿ ಕುಟುಂಬದ ವರನಿಗೆ ಹೀಗೆ ಮದುವೆ ಮಾಡಿಕೊಳ್ಳುವುದು ರೂಢಿಯಲ್ಲಿದೆ

* ಮದುವೆಯ ನಂತರ ವರನ ಮನೆಯಲ್ಲಿ ಬಾಲಕಿಯನ್ನು ಮನೆಗೆಲಸಕ್ಕೆ ಇರಿಸಿಕೊಳ್ಳಲಾಗುತ್ತದೆ. ಊಟ–ವಸತಿ–ಬಟ್ಟೆಯನ್ನಷ್ಟೇ ಕೊಡಲಾಗುತ್ತದೆ

* ಮನೆಯಿಂದ ಹೊರ ಹೋಗಲು ಅವಕಾಶವಿರುವುದಿಲ್ಲ. ಹಲ್ಲೆ, ನಿಂದನೆ, ಲೈಂಗಿಕ ದೌರ್ಜನ್ಯ ಮತ್ತು ಅತ್ಯಾಚಾರದ ಅಪಾಯ ಹೆಚ್ಚು

## ಉಗ್ರ–ಬಂಡುಕೋರರ ಸಂಘಟನೆಗಳಿಗೆ ಬಲಿ

* 6–7 ವರ್ಷದ ಮಕ್ಕಳನ್ನೇ ಒತ್ತಾಯವಾಗಿ ಇಲ್ಲವೇ ಅಪಹರಿಸಿಕೊಂಡು ಈ ಸಂಘಟನೆಗಳಿಗೆ ಸೇರಿಸಿಕೊಳ್ಳಲಾಗುತ್ತದೆ

* ಇವರಿಗೆ ಶಸ್ತ್ರಾಸ್ತ್ರ ತರಬೇತಿ ನೀಡಿ, ವಿಧ್ವಂಸಕ ಕೃತ್ಯಗಳನ್ನು ನಡೆಸಲು ಪ್ರಚೋದನೆ ನೀಡಲಾಗುತ್ತದೆ

* ಉಗ್ರರ ಸಂಘಟನೆಗಳು, ಬಂಡುಕೋರರ ಗುಂಪು ಮತ್ತು ನಕ್ಸಲ್ ಚಳವಳಿಗೆ ಈ ರೀತಿ ಮಕ್ಕಳು ಬಲಿಯಾಗುವುದು ಹೆಚ್ಚು

* ಜಮ್ಮು ಮತ್ತು ಕಾಶ್ಮೀರ, ಪಂಜಾಬ್, ರಾಜಸ್ಥಾನ, ಬಿಹಾರ, ಜಾರ್ಖಂಡ್, ಪಶ್ಚಿಮ ಬಂಗಾಳ, ಅಸ್ಸಾಂ, ಮಣಿಪುರ, ತ್ರಿಪುರ, ಉತ್ತರ ಪ್ರದೇಶ, ಛತ್ತೀಸಗಡ, ಮಧ್ಯಪ್ರದೇಶ, ಕೇರಳ, ತಮಿಳುನಾಡು, ಆಂಧ್ರಪ್ರದೇಶ ಮತ್ತು ಕರ್ನಾಟಕಗಳಲ್ಲಿ ಈ ಸಮಸ್ಯೆ ವ್ಯಾಪಕವಾಗಿದೆ

••••• ಮಾಹಿತಿ ವೇದಿಕೆ ••••••••

## ವರದಕ್ಷಿಣೆ ಪಿಡುಗು ಮತ್ತು ಕಾನೂನು

ವರದಕ್ಷಿಣೆ ಎಂಬುದು ಸಮಾಜದಲ್ಲಿ ವ್ಯಾಪಕವಾಗಿ ಬೇರೂರಿರುವ ಪಿಡುಗು. ಅತಿ ಹೆಚ್ಚಾಗಿ ಮಹಿಳೆಯರ ಶೋಷಣೆಗೆ ಕಾರಣವಾಗಿರುವ ಪಿಡುಗು. ಇದನ್ನು ನಿಯಂತ್ರಿಸುವುದಕ್ಕಾಗಿ 1961 ರಷ್ಟು ಹಿಂದೆಯೇ ವರದಕ್ಷಿಣೆ ನಿಷೇಧ ಅಧಿನಿಯಮ ಜಾರಿಗೆ ಬಂತು. ಆದರೆ ಇದರಿಂದ ಈ ಪಿಡುಗನ್ನು ನಿವಾರಿಸುವುದಿರಲಿ ನಿಯಂತ್ರಿಸಲೂ ಸಾಧ್ಯವಾಗಲಿಲ್ಲ. ಹೆಚ್ಚುತ್ತಿರುವ ವರದಕ್ಷಿಣೆ ಕಿರುಕುಳ ಮತ್ತು ವರದಕ್ಷಿಣೆ ಸಾವುಗಳನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು 1984ರಲ್ಲಿ ಈ ಅಧಿನಿಯಮಕ್ಕೆ ತಿದ್ದುಪಡಿ ತರಲಾಯಿತು.

ಈ ಕಾನೂನಿನ ಪ್ರಕಾರ-

* ವರದಕ್ಷಿಣೆ ಕೊಡುವುದು, ಕೇಳುವುದು, ತೆಗೆದುಕೊಳ್ಳುವುದು ಮತ್ತು ವರದಕ್ಷಿಣೆ ಕೊಡುವುದಾಗಿ ಜಾಹೀರಾತು ಕೊಡುವುದು ಅಪರಾಧ.

* ವರದಕ್ಷಿಣೆ ನೀಡುವ ಮತ್ತು ತೆಗೆದುಕೊಳ್ಳುವ ಅಪರಾಧಕ್ಕೆ ಶಿಕ್ಷೆ-ಕನಿಷ್ಠ ಐದು ವರ್ಷಗಳ ಕಾರಾವಾಸ ಮತ್ತು 15,000 ರೂಗಳವರೆಗೆ ಜುಲ್ಮಾನೆ.

* ವರದಕ್ಷಿಣೆ ಕೇಳುವ ಅಪರಾಧಕ್ಕೆ ಶಿಕ್ಷೆ-ಕನಿಷ್ಠ ಎರಡು ವರ್ಷಗಳ ಕಾರಾವಾಸ ಮತ್ತು 10,000 ರೂಗಳ ವರೆಗೆ ಜುಲ್ಮಾನೆ.

ಈ ಪಿಡುಗು ತೊಲಗಬೇಕಾದರೆ ಜನ ಜಾಗೃತಿ ಹಾಗೂ ಸಹಕಾರ ಮುಖ್ಯ

ದೂರು:

* ದೂರು ನೀಡುವ ವ್ಯಕ್ತಿ: ವರದಕ್ಷಿಣೆ ಬೇಡಿಕೆಯಿಂದ ತೊಂದರೆಗೆ ಒಳಗಾದ ವ್ಯಕ್ತಿ, ಅಥವಾ ಅಂಥ ವ್ಯಕ್ತಿಯ ತಂದೆ, ತಾಯಿ ಅಥವಾ ಆ ವ್ಯಕ್ತಿಯ ಯಾರೇ ಸಂಬಂಧಿ ಅಥವಾ ಮಾನ್ಯತೆ ಪಡೆದ ಯಾವುದೇ ಸ್ವಯಂ ಸೇವಾ ಸಂಘ/ಸಂಸ್ಥೆ ಲಿಖಿತ ದೂರು ನೀಡಬಹುದು.

* ದೂರು ಸ್ವೀಕರಿಸುವ ಅಧಿಕಾರಿಗಳು: ಜಿಲ್ಲಾ ಮಟ್ಟದಲ್ಲಿ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಹಾಯಕ ನಿರ್ದೇಶಕರು/ಉಪ-ನಿರ್ದೇಶಕರು; ತಾಲೂಕುಗಳಲ್ಲಿ, ಆ ಇಲಾಖೆಯ ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿಗಳು ಹಾಗೂ ಕಂದಾಯ ಇಲಾಖೆಯ ತಹಸೀಲ್ದಾರರು. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಮುಖ್ಯ ವರದಕ್ಷಿಣೆ ನಿಷೇಧ ಅಧಿಕಾರಿಗಳಾಗಿರುತ್ತಾರೆ.

ಘೋಷಣಾ ಪ್ರಮಾಣ ಪತ್ರ: ಪ್ರತಿಯೊಬ್ಬ ಸರ್ಕಾರಿ ನೌಕರನೂ ವಿವಾಹದ ನಂತರ ತಾನು ವರದಕ್ಷಿಣೆ ತೆಗೆದುಕೊಂಡಿಲ್ಲವೆಂದು ಘೋಷಿಸುವ ಪ್ರಮಾಣ ಪತ್ರವನ್ನು ಇಲಾಖೆ ಮುಖ್ಯಸ್ಥರಿಗೆ ನೀಡಬೇಕು ಮತ್ತು ಇದಕ್ಕೆ ಪತ್ನಿ, ತಂದೆ ಹಾಗೂ ಮಾವನ ಸಾಕ್ಷಿಯಿರಬೇಕು.

**ವರದಕ್ಷಿಣೆ ಸಾವು:** ವರದಕ್ಷಿಣೆ ಕಿರುಕುಳ ಸಹಿಸಲಾರದೆ ಆತ್ಮಹತ್ಯೆ ಮಾಡಿಕೊಳ್ಳುವವರ ಸಂಖ್ಯೆ ಹಾಗೂ ವರದಕ್ಷಿಣೆಗಾಗಿ ವಧೂದಹನ ಪ್ರಕರಣಗಳು ಹೆಚ್ಚಾದುದರಿಂದ, ಅಂಥ ಸಾವುಗಳನ್ನು 'ವರದಕ್ಷಿಣೆ ಸಾವು'ಗಳೆಂದು ಗುರುತಿಸಿ, ಭಾರತ ದಂಡ ಸಂಹಿತೆಯ 304 ಬಿ ಪ್ರಕರಣದ ಅಡಿಯಲ್ಲಿ ಅದನ್ನು ಒಂದು ಪ್ರತ್ಯೇಕ ಅಪರಾಧವನ್ನಾಗಿ ಮಾಡಲಾಯಿತು.

ವರದಕ್ಷಿಣೆ ಪಡೆದು ಮದುವೆಯಾಗುವುದು ಮತ್ತು ವರದಕ್ಷಿಣೆ ನೀಡಿ ಮದುವೆಯಾಗುವುದು ಎರಡೂ ಅವಮಾನಕರ ಎಂಬ ಭಾವ ನಮ್ಮ ತರುಣ ತರುಣಿಯರಲ್ಲಿ ಮೂಡಬೇಕು, ವರದಕ್ಷಿಣೆ ಬೇಡುವವರಿಗೆ ಹೆಣ್ಣು ಸಿಗದ ಪರಿಸ್ಥಿತಿ ಮತ್ತು ಅವರವರ ಸಮುದಾಯದಿಂದ ಬಹಿಷ್ಕೃತರಾಗುವ ಪರಿಸ್ಥಿತಿ ನಿರ್ಮಾಣವಾಗಬೇಕು.

ವರದಕ್ಷಿಣೆ ಬೇಡುವವರ ವಿರುದ್ಧ ನಿರ್ದಾಕ್ಷಿಣ್ಯವಾಗಿ ದೂರು ನೀಡಬೇಕು. ನೀಡುವವರಿಲ್ಲದಿದ್ದರೆ ತೆಗೆದು ಕೊಳ್ಳುವವರ ಪೀಳಿಗೆ ಬೆಳೆಯಲಾರದು. ಆದರೆ ವರದಕ್ಷಿಣೆ ನೀಡಿಯಾದರೂ ಸರಿ ಹೆಣ್ಣು ಮಗಳ ಮದುವೆ ಮಾಡಬೇಕು, ಜವಾಬ್ದಾರಿ ಕಳೆದುಕೊಳ್ಳ ಬಿಡಬೇಕು ಎಂಬ ಹೆಣ್ಣು ಹೆತ್ತವರ ಮನೋಭಾವ ವರದಕ್ಷಿಣೆ ನೀಡಿಕೆಗೆ ಕಾರಣ. ಇಂಥ ಮನೋಭಾವಕ್ಕೆ ಕಾರಣ ನಮ್ಮ ಸಮಾಜ.

ನಾವೆಲ್ಲರೂ ನಮ್ಮ ಸಮಾಜದ ಭಾಗಗಳು. ನಾವು ಮನಸ್ಸು ಮಾಡಿದರೆ ಸಮಾಜದಲ್ಲಿ ಬದಲಾವಣೆ ತರುವುದು ಸಾಧ್ಯ. ವರದಕ್ಷಿಣೆ ಬೇಡಿದರೆಂಬ ಕಾರಣಕ್ಕೆ ವರನನ್ನು ಧಿಕ್ಕರಿಸಿ ಹಸೆ ಮಣೆಯ ಮೇಲಿಂದ ಎದ್ದು ಬಂದ ತರುಣಿಯರು ಆದರ್ಶವಾಗಬೇಕು. ಇದಕ್ಕೆ ಹೆಣ್ಣು ಹೆತ್ತವರು ಬೆಂಬಲಿಸಬೇಕು. ಇದು ಆಂದೋಲನವಾಗಬೇಕು.

ವಿಶ್ವದ ಕೆಲವು ದೇಶಗಳಲ್ಲಿ ಯುವ ನಾಯಕರುಗಳು ದೇಶವನ್ನಾಳುತ್ತಿದ್ದಾರೆ.ಅತಿ ಚಿಕ್ಕ ವಯಸ್ಸಿನಲ್ಲೇ( 45 ವರ್ಷದೊಳಗಿನವರು) ದೇಶದ ಪ್ರಧಾನಿಯಾಗಿ, ರಾಜರಾಗಿ ಮತ್ತು ಸರ್ವಾಧಿಕಾರಿಯಾಗಿ ಆಡಳಿತ ನಡೆಸುತ್ತಿರುವ ಕುರಿತು ಒಂದು ಪಕ್ಷಿನೋಟ.

## ಪ್ರಧಾನ ಮಂತ್ರಿಗಳು

**ಚಾರ್ಲ್ಸ್ ಮೈಕೆಲ್**

ಹುದ್ದೆ: ಪ್ರಧಾನ ಮಂತ್ರಿ

ದೇಶ: ಬೆಲ್ಜಿಯಂ

ಜನನ: ಡಿಸೆಂಬರ್-21-1975.

**ಲಿಯೊ ವಾರಡ್ಕರ್**

ದೇಶ: ಐರ್ಲೆಂಡ್

ಹುದ್ದೆ: ಪ್ರಧಾನ ಮಂತ್ರಿ

ಜನನ: ಜನವರಿ18- 1979

**ಯೊಸೆಪ್ ಚಾಹೆದ್**

ಹುದ್ದೆ: ಪ್ರಧಾನ ಮಂತ್ರಿ

ದೇಶ:ಟ್ಯುನೀಸಿಯ.

ಜನನ: ಸೆಪ್ಟೆಂಬರ್ 18-1975

**ಎಡ್ವರ್ಡ್ ಫಿಲಿಪ್**

ದೇಶ: ಫ್ರಾನ್ಸ್

ಹುದ್ದೆ: ಪ್ರಧಾನ ಮಂತ್ರಿ

ಜನನ: ನವೆಂಬರ್- 20-1970

**ವೋಲೋಡಿಮಿರ್ ಗ್ರಾಯಾಸ್ ಮ್ಯಾನ್**

ಹುದ್ದೆ: ಪ್ರಧಾನ ಮಂತ್ರಿ

ದೇಶ: ಉಕ್ರೇನ್

ಜನನ: ಜನವರಿ 20,1978.

**ಜುರಿ ರಾತಾಸ್**

ದೇಶ: ಎಪ್ಟೋನಿಯಾ

ಹುದ್ದೆ: ಪ್ರಧಾನ ಮಂತ್ರಿ

ಜನನ: ಜುಲೈ 2,1978

**ಜೊರಾನ್ ಜೇವ್**

ಹುದ್ದೆ: ಪ್ರಧಾನ ಮಂತ್ರಿ

ದೇಶ: ಮೆಸಿಡೊನಿಯಾ

ಜನನ: ಅಕ್ಟೋಬರ್ 8,1974

## ರಾಜರು ✍

**ಜೆಗ್ಮೆ ಕೇಸರ್ ನಾಮ್ಗೆಲ್ ವಾಂಗ್ಚುಕ್**

ದೇಶ: ಭೂತಾನ್

ಜನನ: ಫೆಬ್ರವರಿ 21,1980

**ತಾಮೀಮ್ ಬಿನ್ ಹಮದ್ ಆಲ್ ಧಾನಿ**

ದೇಶ:ಕತಾರ್ ಎಮಿರ್

ಜನನ: ಜೂನ್ 3,1980

## ಸರ್ವಾಧಿಕಾರಿ

**ಕಿಮ್ ಜೊಂಗ್-ಯು**

ದೇಶ: ಉತ್ತರ ಕೋರಿಯಾ

ಜನನ: ಜನವರಿ 8,1982

## ಭಾರತ ದೇಶ ಪ್ರಪಂಚಕ್ಕೆ ನೀಡಿದ 20 ಕೊಡುಗೆಗಳು.!

ಭಾರತ ದೇಶವೆಂದಾಕ್ಷಣ ಸಂಸ್ಕೃತಿ,ಸಂಪ್ರದಾಯ,ಪುರಾಣ,ಇತಿಹಾಸ, ವೇದಗಳು ,ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣತ್ಯಾಗ ಮಾಡಿದ ವೀರರು,ಅನುರಾಗ,ಆತ್ಮೀಯತೆ, ಕುಲ ಮತಗಳ ಬೇಧವಿಲ್ಲದ ಸೋದರತ್ವ,ಇವೆಲ್ಲವೂ ನಮ್ಮ ಕಣ್ಣುಮುಂದೆ ಬರುತ್ತವೆ. ಇಂದು ನಮ್ಮ ದೇಶವನ್ನು ನೋಡಿ ಇತರೆ ದೇಶಗಳು ಎಷ್ಟೋ ವಿಷಯಗಳನ್ನು ಕಲಿತುಕೊಳ್ಳುತ್ತಿವೆ. ಪ್ರಸ್ತುತ ವಿದೇಶಗಳಲ್ಲಿ ಉಪಯೋಗಿಸುತ್ತಿರುವ ಅನೇಕ ವಸ್ತುಗಳು ನಮ್ಮ ಬಾರತೀಯರು ಪರಿಚಯಿಸಿದುವುಗಳೇ ಆಗಿವೆ. ಅವುಗಳನ್ನು ಕುರಿತು ತಿಳಿದುಕೊಳ್ಳೋಣ.

### 1.ಮೊತ್ತ ಮೊದಲ ವಿಶ್ವ ವಿದ್ಯಾಲಯ :

ಪ್ರಪಂಚದ ಮೊತ್ತಮೊದಲ ವಿಶ್ವ ವಿದ್ಯಾಲಯವನ್ನು ಕ್ರಿ.ಪೂ.700 ರಲ್ಲಿ ತಕ್ಷಶಿಲೆಯಲ್ಲಿ ನಿರ್ಮಿಸಿದ್ದಾರೆ.ಇಲ್ಲಿ 300 ಭೋದನಾ ಕೊಠಡಿಗಳು,ಪ್ರಯೋಗ ಶಾಲೆಗಳು,ವಾಚನಾಲಯಗಳು, ಖಗೋಳ ಪರಿಶೋಧನೆಗೆ ಸಂಬಂಧಿಸಿದವು ಇವೆ. ಸುಮಾರು 10000 ವಿದ್ಯಾರ್ಥಿಗಳು ಪ್ರಪಂಚದ ಮೂಲೆ ಮೂಲೆಗಳಿಂದ ಬಂದು ವಿದ್ಯಾಭ್ಯಾಸ ನಡೆಸಿದ್ದಾರೆಂದು, 200 ಪ್ರೊಫೆಸರ್ ಗಳು ವಿದ್ಯೆಯನ್ನು ಬೋಧಿಸಿದ್ದಾರೆಂದು ಚೀನಾ ದೇಶದ 'ಹುಯನ್ಸಾಂಗ್' ತನ್ನ ದಿನಚರಿ ಪುಸ್ತಕದಲ್ಲಿ ಬರೆದಿಟ್ಟಿದ್ದಾನೆ.

2.ಪ್ರಪಂಚಕ್ಕೆ 'ಸೊನ್ನೆ'(0) ಯನ್ನು ಪರಿಚಯಿಸಿದವರು ನಮ್ಮ ದೇಶದ 'ಆರ್ಯಭಟ್ಟ'. ಸೊನ್ನೆಯಿಲ್ಲದ ಲೆಕ್ಕವನ್ನು ಊಹಿಸಲೂ ಅಸಾಧ್ಯ.

3.6 ನೇ ಶತಮಾನದಲ್ಲಿ 'ಚೆಸ್'(ಚದುರಂಗ) ನ್ನು ಗುಪ್ತರು ಪ್ರಪಂಚಕ್ಕೆ ಪರಿಚಯಿಸಿದರು. ಇವರ ಕಾಲದಲ್ಲಿ ಕಂಡುಹಿಡಿದ ಈ ಆಟವನ್ನು ಅಂದು 'ಚತುರಂಗ'ಎಂದು ಕರೆಯುತ್ತಿದ್ದರಂತೆ.

4. ಪ್ರಪಂಚದಲ್ಲಿ ಮೊತ್ತಮೊದಲಿಗೆ ಅಲಂಕಾರಿಕ ಗುಂಡಿಗಳನ್ನು ಕಂಡು ಹಿಡಿದವರು ನಮ್ಮವರೇ. ಸಮುದ್ರದಲ್ಲಿ ದೊರೆಯುತ್ತಿದ್ದ ಚಿಪ್ಪುಗಳನ್ನು ಅಂಗಿಗಳಿಗೆ 'ಗುಂಡಿ'ಗಳನ್ನಾಗಿ ಉಪಯೊಗಿಸುತ್ತಿದ್ದರು. ಇವು ರೇಖಾ ಗಣಿತದ ಆಕಾರದಲ್ಲಿ ಇರುತ್ತಿದ್ದವು. ಅವುಗಳಿಗೆ ನಡುವೆ ರಂದ್ರಗಳನ್ನು ಮಾಡಿ ಗುಂಡಿಗಳಾಗಿ ಉಪಯೋಗಿಸುತ್ತಿದ್ದರು.

5. ಈಗ ನಾವು ಶಾಂಪೂ ಎಂದು ಕರೆಯುತ್ತಿರುವುದರ ಹೆಸರು ಹಿಂದಿ ಭಾಷೆಯ 'ಚಾಂಪು' ಪದದಿಂದ 1762 ರಲ್ಲಿ ಬೆಳಕಿಗೆ ಬಂದಿತಂತೆ. ಪೂರ್ವ ಬಾರತ ದೇಶದ ಮೊಘಲ್ ಸಾಮ್ರಾಜ್ಯದಲ್ಲಿ ಕ್ಷಾರವನ್ನು ಎಣ್ಣೆಯಲ್ಲಿ ಬೆರೆಸಿ ತಲೆಯನ್ನು ಮರ್ಧಿಸುತ್ತಿದ್ದರಂತೆ. ಬಂಗಾಳದ ವ್ಯಾಪಾರಿ 'ಶೇಖ್ದೀನ್ ಮೊಹಮ್ಮದ್' ಮೊದಲಬಾರಿಗೆ ಬ್ರಿಟನ್ ದೇಶದಲ್ಲಿ ಪರಿಚಯಿಸಿದನಂತೆ.

6.ಕುಷ್ಠರೋಗ ನಿವಾರಣೆ 6 ನೇ ಶತಮಾನದಲ್ಲಿ ಭಾರತೀಯ ವೈದ್ಯರು ಕುಷ್ಠರೋಗ ನಿವಾರಣೆಗೆ ಔಷದವನ್ನು ಕಂಡುಹಿಡಿದರು. ಇದನ್ನು ಕುರಿತು ಶುಶೃತ ಸಂಹಿತೆ ಹಾಗೂ ಅಥರ್ವಣ ವೇದದಲ್ಲಿ ಉಲ್ಲೇಖಿಸಲಾಗಿದೆ.

7.ವೈಕುಂಟಪಾಳಿ ಎಂದು ಕರೆಯಲ್ಪಡುವ ಹಾವು ಏಣಿ ಆಟವನ್ನು ಭಾರತೀಯರು ಕಂಡುಹಿಡಿದಿದ್ದಾರೆ. ಇದರ ನಿಜವಾದ ಹೆಸರು' ಮೋಕ್ಷಪತ್'. ಬಾರತನ್ನು ಬ್ರಿಟಿಷರು ಆಳುತ್ತಿದ್ದ ಸಮಯದಲ್ಲಿ ಇಂಗ್ಲೆಂಡ್ಡಾಗೂ ಅಮೆರಿಕ ದೇಶಕ್ಕೆ ಮಾರ್ಗವನ್ನು ಕಂಡುಹಿಡಿಯುವ ರೀತಿಯಲ್ಲಿ ಈ ಆಟವನ್ನು 1943 ರಲ್ಲಿ ರೂಪಿಸಿದರು.

8. ಎಂತಹ ರೋಗವನ್ನಾದರೂ ಗುಣಪಡಿಸುವ ಮೂಲಿಕೆಗಳು,ಓಷಧಿಗಳು,ಸುಗಂಧ ದ್ರವ್ಯಗಳನ್ನು ಕ್ರಿಸ್ತ ಪೂರ್ವದಲ್ಲೇ ಆಯುರ್ವೇದದಲ್ಲಿ ಬೆಳಕು ಚೆಲ್ಲಿದರು. ಎಷ್ಟೇ ಆಧುನಿಕ ವೈದ್ಯ ಪದ್ಧತಿಗಳು ಬಂದರೂ ಆಯುರ್ವೇದದ ಬಗ್ಗೆ ಹೆಚ್ಚಿನವರ ಒಲವಿದೆ.

9.7 ನೇ ಶತಮಾನದಲ್ಲಿ ಬ್ರಹ್ಮಪುತ್ರ ಅಭಿವೃದ್ಧಿಪಡಿಸಿದ ಖಗೋಳಶಾಸ್ತ್ರದ ಪ್ರಕಾರ ಭೂಮಿಗೂ ಸೂರ್ಯನಿಗೂ ಮಧ್ಯೆ ಇರುವ ದೂರ, ಸೂರ್ಯನ ಕಕ್ಷೆಯಲ್ಲಿ ಭೂಮಿ ತೆಗೆದುಕೊಳ್ಳುವ ಅವಧಿ,ನಕ್ಷತ್ರ ಮಂಡಲದ ದೂರ ಇವೆಲ್ಲವನ್ನೂ ಭಾಸ್ಕರಾಚಾರ್ಯ ನಿಖರವಾಗಿ ಹೇಳಿದ್ದಾರೆ.

10.ಬೌದ್ಧಮತ,ಜೈನಮತಗಳು ಭಾರತದಲ್ಲಿ ಜನ್ಮತಳೆದಿವೆ. ಏಷಿಯಾ ಖಂಡದವರೆಗೂ ಬೌದ್ಧಮತದ ಹಿರಿಮೆ ಗೊತ್ತಿದ್ದರೂ,ಜೈನ ಮತವು ಕೇವಲ ಭಾರತದೇಶದಲ್ಲಿ ಮಾತ್ರ ಅಭಿವೃದ್ಧಿಗೆ ಬಂದಿದೆ. ಚರಿತ್ರೆಯ ಕಾಲದಲ್ಲಿ ಈ ಎರಡೂ ಮತಗಳು ಜನ್ಮತಳೆದಿವೆ.

11. ದಶಮಾನ ಪದ್ಧತಿಯನ್ನು ಕಂಡುಹಿಡಿದವರು ನಮ್ಮ ಭಾರತೀಯರೇ.

12. ಕಣ್ಣಿಯ ಪೊರೆಯ ಚಿಕಿತ್ಸೆಯನ್ನು ಕಂಡುಹಿಡಿದವರು ನಮ್ಮ ಭಾರತೀಯರೇ. ಈ ಶಸ್ತ್ರಚಿಕಿತ್ಸೆಯಿಂದ ಕಣ್ಣಿನ ದೃಷ್ಟಿಸರಿಯಾಗಿ,ಪೊರೆಯ ಸಮಸ್ಯೆ ನಿವಾರಣೆಯಾಗುತ್ತದೆ. ನಂತರದ ಕಾಲದಲ್ಲಿ ಪ್ರಪಂಚದೆಲ್ಲೆಡೆ ಈ ಶಸ್ತ್ರ ಚಿಕಿತ್ಸಾ ಪದ್ಧತಿಗೆ ಬೆಳಕಿಗೆ ಬಂದಿತು.

13. ಗಿಡಗಳ ಬೆಳವಣಿಗೆಯನ್ನು ಅಳೆಯುವ ಸಾಧನವನ್ನು 20 ನೇ ಶತಮಾನದಲ್ಲಿ 'ಸರ್.ಜಗಧೀಶ್ ಚಂದ್ರ ಭೋಸ್' ಕಂಡುಹಿಡಿದರು.

14. 13 ನೇ ಶತಮಾನದಲ್ಲಿ ಕಾಶ್ಮೀರವನ್ನು ಆಳಿದ ಜೈನ್-ಉಲ್-ಅಬೀದಿ' ಮೊದಲು ಕಾಶ್ಮಿರದ ಉಣ್ಣೆಯನ್ನು ಆವಿಸ್ಕರಿಸಿದರು.

15.ಯು.ಎಸ್.ಬಿ, ಅತಿವೇಗದ ಗ್ರಾಫಿಕ್ ಪೋರ್ಟ್,ಪವರ್ ಮೇನೇಜ್ ಮೆಂಟ್.ಪಿಸಿ ಐ ಆಕ್ಸೆಸ್ ಚಿಪ್ಸ್ ಗಳನ್ನು ಅಭಿವೃದ್ಧಿಪಡಿಸಿದ್ದು ಭಾರತದೇಶದ ಇಂಡೋ ಅಮೆರಿಕನ್ ಆರ್ಕಿಟೆಕ್ಟ್ ಅಜಯ್.ವಿ.ಭಟ್.

16 'ಪ್ಲೇಯಿಂಗ್ ಕಾರ್ಡ್ಸ್' ಗಳನ್ನಾಗಿ ಉಯೋಗಿಸುತ್ತಿರುವ ಕಾರ್ಡ್ ಗಳನ್ನು ಹಿಂದೆ ನಮ್ಮ ದೇಶದಲ್ಲಿ 'ಕೃದಪತ್ರಂ' ಎಂಬ ಚಿತ್ರಗಳುಳ್ಳ ಕಾರ್ಡ್ ಗಳನ್ನು ನಮ್ಮ ದೇಶದಲ್ಲಿ ಉಪಯೋಗಿಸುತ್ತಿದ್ದರಂತೆ. ಅವುಗಳ ಪ್ರೇರಣೆಯಿಂದಲೇ ಇಂದಿನ 'ಪ್ಲೇಯಿಂಗ್ ಕಾರ್ಡ್ಸ್' ತಯಾರಾದುವಂತೆ.

## ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳ ವರ್ಷ - ಸ್ಥಳ - ಅಧ್ಯಕ್ಷರ ಪಟ್ಟಿ

### ಕ್ರ.ಸಂ - ವರ್ಷ - ಸ್ಥಳ - ಅಧ್ಯಕ್ಷತೆ

1. 1915 - ಬೆಂಗಳೂರು - ಎಚ್.ವಿ.ನಂಜುಂಡಯ್ಯ. 2. 1916 - ಬೆಂಗಳೂರು - ಎಚ್.ವಿ.ನಂಜುಂಡಯ್ಯ

3. 1917 - ಮೈಸೂರು - ಎಚ್.ವಿ.ನಂಜುಂಡಯ್ಯ . 4. 1918 - ಧಾರವಾಡ - ಆರ್.ನರಸಿಂಹಾಚಾರ್

5. 1919 - ಹಾಸನ - ಕರ್ಪೂರ ಶ್ರೀನಿವಾಸರಾವ್ 6. 1920 - ಹೊಸಪೇಟೆ - ರೊದ್ದ ಶ್ರೀನಿವಾಸರಾವ

7. 1921 - ಚಿಕ್ಕಮಗಳೂರು - ಕೆ.ಪಿ.ಪುಟ್ಟಣ್ಣ ಶೆಟ್ಟಿ 8. 1922 - ದಾವಣಗೆರೆ - ಎಂ.ವೆಂಕಟಕೃಷ್ಣಯ್ಯ

9. 1923 - ಬಿಜಾಪುರ - ಸಿದ್ಧಾಂತಿ ಶಿವಶಂಕರ ಶಾಸ್ತ್ರಿ 10. 1924 - ಕೋಲಾರ - ಹೊಸಕೋಟೆ ಕೃಷ್ಣಶಾಸ್ತ್ರಿ

11. 1925 - ಬೆಳಗಾವಿ - ಬೆನಗಲ್ ರಾಮರಾವ್. 12. 1926 - ಬಳ್ಳಾರಿ - ಫ.ಗು.ಹಳಕಟ್ಟಿ

13. 1927 - ಮಂಗಳೂರು - ಆರ್.ತಾತಾಚಾರ್ಯ .14. 1928 - ಕಲಬುರ್ಗಿ - ಬಿ ಎಂ ಶ್ರೀ

15. 1929 - ಬೆಳಗಾವಿ - ಮಾಸ್ತಿ ವೆಂಕಟೇಶ ಅಯ್ಯಂಗಾರ್ 16. 1930 - ಮೈಸೂರು - ಆಲೂರು ವೆಂಕಟರಾಯರು

17. 1931 - ಕಾರವಾರ - ಮುಳಿಯ ತಿಮ್ಮಪ್ಪಯ್ಯ. 18. 1932 - ಮಡಿಕೇರಿ - ಡಿ ವಿ ಜಿ

19. 1933 - ಹುಬ್ಬಳ್ಳಿ - ವೈ.ನಾಗೇಶ ಶಾಸ್ತ್ರಿ 20. 1934 - ರಾಯಚೂರು - ಪಂಜೆ ಮಂಗೇಶರಾಯರು

21. 1935 - ಮುಂಬಯಿ - ಎನ್.ಎಸ್.ಸುಬ್ಬರಾವ್ 22. 1937 - ಜಮಖಂಡಿ - ಬೆಳ್ಳಾವೆ ವೆಂಕಟನಾರಣಪ್ಪ

23. 1938 - ಬಳ್ಳಾರಿ - ರಂಗನಾಥ ದಿವಾಕರ. 24. 1939 - ಬೆಳಗಾವಿ - ಮುದವೀಡು ಕೃಷ್ಣರಾಯರು

25. 1940 - ಧಾರವಾಡ - ವೈ.ಚಂದ್ರಶೇಖರ ಶಾಸ್ತ್ರಿ 26. 1941 - ಹೈದರಾಬಾದ್ - ಎ.ಆರ್.ಕೃಷ್ಣಶಾಸ್ತ್ರಿ

27. 1943 - ಶಿವಮೊಗ್ಗ - ದ.ರಾ.ಬೇಂದ್ರೆ 28. 1944 - ರಬಕವಿ - ಎಸ್.ಎಸ್.ಬಸವನಾಳ

29. 1945 - ಮದರಾಸು - ಟಿ ಪಿ ಕೈಲಾಸಂ 30. 1947 - ಹರಪನಹಳ್ಳಿ - ಸಿ.ಕೆ.ವೆಂಕಟರಾಮಯ್ಯ

31. 1948 - ಕಾಸರಗೋಡು - ತಿ.ತಾ.ಶರ್ಮ. 32. 1949 - ಕಲಬುರ್ಗಿ - ಉತ್ತಂಗಿ ಚನ್ನಪ್ಪ

33. 1950 - ಸೊಲ್ಲಾಪುರ - ಎಮ್.ಆರ್.ಶ್ರೀನಿವಾಸಮೂರ್ತಿ. 34. 1951 - ಮುಂಬಯಿ - ಗೋವಿಂದ ಪೈ

35. 1952 - ಬೇಲೂರು - ಎಸ್.ಸಿ.ನಂದೀಮಠ. 36. 1954 - ಕುಮಟಾ - ವಿ.ಸೀತಾರಾಮಯ್ಯ

37. 1955 - ಮೈಸೂರು - ಶಿವರಾಮ ಕಾರಂತ. 38. 1956 - ರಾಯಚೂರು - ಶ್ರೀರಂಗ

39. 1957 - ಧಾರವಾಡ - ಕುವೆಂಪು 40. 1958 - ಬಳ್ಳಾರಿ - ವಿ.ಕೆ.ಗೋಕಾಕ

41. 1959 - ಬೀದರ - ಡಿ.ಎಲ್.ನರಸಿಂಹಾಚಾರ್ 42. 1960 - ಮಣಿಪಾಲ - ಅ.ನ. ಕೃಷ್ಣರಾಯ

43. 1961 - ಗದಗ - ಕೆ.ಜಿ.ಕುಂದಣಗಾರ. 44. 1963 - ಸಿದ್ದಗಂಗಾ - ರಂ.ಶ್ರೀ.ಮುಗಳಿ

45. 1965 - ಕಾರವಾರ - ಕಡೆಂಗೋಡ್ಲು ಶಂಕರಭಟ್ಟ. 46. 1967 - ಶ್ರವಣಬೆಳಗೊಳ - ಆ.ನೇ.ಉಪಾಧ್ಯೆ

47. 1970 - ಬೆಂಗಳೂರು - ದೇ.ಜವರೆಗೌಡ. 48. 1974 - ಮಂಡ್ಯ - ಜಯದೇವಿತಾಯಿ ಲಿಗಾಡೆ

49. 1976 - ಶಿವಮೊಗ್ಗ - ಎಸ್.ವಿ.ರಂಗಣ್ಣ. 50. 1978 - ದೆಹಲಿ - ಜಿ.ಪಿ.ರಾಜರತ್ನಂ

51. 1979 - ಧರ್ಮಸ್ಥಳ - ಗೋಪಾಲಕೃಷ್ಣ ಅಡಿಗ. 52. 1980 - ಬೆಳಗಾವಿ - ಬಸವರಾಜ ಕಟ್ಟೀಮನಿ

53. 1981 - ಚಿಕ್ಕಮಗಳೂರು - ಪು.ತಿ.ನರಸಿಂಹಾಚಾರ್ 54. 1981 - ಮಡಿಕೇರಿ - ಶಂ.ಬಾ.ಜೋಶಿ

55. 1982 - ಶಿರಸಿ - ಗೊರೂರು ರಾಮಸ್ವಾಮಿ ಐಯಂಗಾರ್ 56. 1984 - ಕೈವಾರ - ಎ.ಎನ್.ಮೂರ್ತಿ ರಾವ್

57. 1985 - ಬೀದರ್ - ಹಾ.ಮಾ.ನಾಯಕ. 58. 1987 - ಕಲಬುರ್ಗಿ - ಸಿದ್ದಯ್ಯ ಪುರಾಣಿಕ

59. 1990 - ಹುಬ್ಬಳ್ಳಿ - ಆರ್.ಸಿ.ಹಿರೇಮಠ. 60. 1991 - ಮೈಸೂರು - ಕೆ.ಎಸ್. ನರಸಿಂಹಸ್ವಾಮಿ

61. 1992 - ದಾವಣಗೆರೆ - ಜಿ.ಎಸ್.ಶಿವರುದ್ರಪ್ಪ. 62. 1993 - ಕೊಪ್ಪಳ - ಸಿಂಪಿ ಲಿಂಗಣ್ಣ

63. 1994 - ಮಂಡ್ಯ - ಚದುರಂಗ. 64. 1995 - ಮುಧೋಳ - ಎಚ್, ಎಲ್, ನಾಗೇಗೌಡ

65. 1996 - ಹಾಸನ - ಚನ್ನವೀರ ಕಣವಿ 66. 1997 - ಮಂಗಳೂರು - ಕಯ್ಯಾರ ಕಿಞ್ಞಣ್ಣ ರೈ

67. 1999 - ಕನಕಪುರ - ಎಸ್.ಎಲ್.ಭೈರಪ್ಪ. 68. 2000 - ಬಾಗಲಕೋಟೆ - ಶಾಂತಾದೇವಿ ಮಾಳವಾಡ

69. 2002 - ತುಮಕೂರು - ಯು.ಆರ್. ಅನಂತಮೂರ್ತಿ 70.2003 - ಬೆಳಗಾಂ - ಪಾಟೀಲ ಪುಟ್ಟಪ್ಪ

71. 2004- ಮೂಡುಬಿದಿರೆ - ಕಮಲಾ ಹಂಪನಾ 72. 2006 - ಬೀದರ್ - ಶಾಂತರಸ ಹೆಂಬೆರಳು

73. 2007 - ಶಿವಮೊಗ್ಗ - ನಿಸಾರ್ ಅಹಮ್ಮದ್ 74. 2008 - ಉಡುಪಿ - ಎಲ್. ಎಸ್. ಶೇಷಗಿರಿ ರಾವ್

75. 2009 - ಚಿತ್ರದುರ್ಗ - ಎಲ್. ಬಸವರಾಜು 76. 2010. ಗದಗ - ಡಾ. ಗೀತಾ ನಾಗಭೂಷಣ

77. 2011 - ಬೆಂಗಳೂರು - ಜಿ. ವೆಂಕಟಸುಬ್ಬಯ್ಯ. 78. 2012 - ಗಂಗಾವತಿ - ಸಿ.ಪಿ ಕೃಷ್ಣಕುಮಾರ್

79. 2013 - ವಿಜಾಪುರ - ಕೋ.ಚನ್ನಬಸಪ್ಪ. 80. 2014 - ಕೊಡಗು - ನಾ ಡಿಸೋಜ

81. 2015 - ಶ್ರವಣಬೆಳಗೊಳ - ಡಾ. ಸಿದ್ದಲಿಂಗಯ್ಯ 82. 2016 - ರಾಯಚೂರು - ಬರಗೂರು ರಾಮಚಂದ್ರಪ್ಪ

83. 2017 - ಮೈಸೂರು - ಚಂದ್ರಶೇಖರ ಪಾಟೀಲ

••••• ಮಾಹಿತಿ ವೇದಿಕೆ •••••••••

*ಪರಿಸರ ಸಂರಕ್ಷಣೆ ನಮ್ಮ ಕರ್ತವ್ಯ*✍

*=ಸಂಕ್ಷಿಪ್ತವಾಗಿ ಪ್ರಬಂಧ=*

*ಪ್ರಕೃತಿ ಮನುಷ್ಯನ ಜೀವನಕ್ಕೆ ಏನ್ನೆಲ್ಲ ಕೊಟ್ಟಿಲ್ಲ. ಅಂತಹದರಲ್ಲಿ ಮನುಷ್ಯ ತನ್ನ ವೈಯಕ್ತಿಕ ಪ್ರಯೋಜನಕ್ಕಾಗಿ ಪರಿಸರದ ಮೇಲೆ ನಿರಂತರ ದಾಳಿ ನಡೆಸಿದ್ದಾನೆ. ಇಂತ ಪರಿಸ್ಥಿತಿ ಹೀಗೆ ಮುಂದುವರೆದರೆ ನಮ್ಮ ಸರ್ವನಾಶ ನಮ್ಮ ಕಣ್ಣೆದುರೆ ನಡೆಯಲಿದೆ. ಇದು ನಡೆಯಬಾರದೆಂದರೆ ಇಂದಿನಿಂದಲೆ ಪರಿಸರದ ಸಂರಕ್ಷಣೆ ಬಗ್ಗೆ ಕಾಳಜಿ ವಹಿಸುವುದು ಮುಖ್ಯ. ಪರಿಸರದ ಸಂರಕ್ಷಣೆಗಾಗಿ ನಮ್ಮ ಕೆಲಸ ಕಾರ್ಯಗಳನ್ನು ಬದಿಗೊತ್ತುವ ಅವಶ್ಯಕತೆ ಇಲ್ಲ. ನಮ್ಮ ದೈನಂದಿನ ಜೀವನದಲ್ಲಿ ಕೆಲವೊಂದು ಕ್ರಮಗಳನ್ನು ಅನುಸರಿಸಿದರೆ ಅದೇ ಪರಿಸರ ಉಳಿವಿಗೆ ಸಹಾಯಕವಾಗುತ್ತದೆ.*

*ನಿಸರ್ಗದ ಜೊತೆ ಬೆರೆತು ಬಾಳಿದರೆ ಪರಿಸರದ ಮೇಲೆ ದುಷ್ಪರಿಣಾಮ ಬೀರುವ, ಪರಿಸರದ ಉಳಿವಿಗೆ ಪೂರಕವಾಗುವ ವಿಷಯಗಳ ಬಗ್ಗೆ ನಮ್ಮ ಸಾಮಾನ್ಯ ಜ್ಞಾನ ತಾನಾಗಿಯೇ ಬೆಳೆಯುತ್ತದೆ. ಆದರೆ ಅದು ಅಷ್ಟು ಸುಲಭವಲ್ಲ, ಆಧುನಿಕ ಜಗತ್ತಿನಲ್ಲಿ ತಂತ್ರಜ್ಞಾನದ ಆವಿಷ್ಕಾರದಿಂದ ಇಂದಿನ ಮಾನವನ ಜೀವನ ಹಾಗೂ ಚಟುವಟಿಕೆಗಳು ಅತ್ಯಂತ ಸಂಕೀರ್ಣವಾಗಿವೆ. ಇದರಿಂದ ಹೆಚ್ಚಿನ ಮನುಷ್ಯರು ಪ್ರಕೃತಿಯಿಂದ ದೂರಾಗಿ ವಿವಿಧ ಅನೈಸರ್ಗಿಕ ಚಟುವಟಿಕೆಗಳಲ್ಲಿ ಕಾಲಕಳೆಯುವ ಪರಿಸ್ಥಿತಿ ನಿರ್ಮಾಣವಾಗಿದೆ,*

*ಮನುಷ್ಯನ ಉದಾಸೀನತೆ, ತಿಳಿಗೇಡಿತನದಿಂದ ನಿಸರ್ಗ ಬಸವಳಿಯುತ್ತಾ ಸಾಗುತ್ತಿದೆ, ಈ ಪ್ರಕ್ರಿಯೆಯಲ್ಲಿ ನಾವೆಲ್ಲರೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗೀದಾರರು ಎಂಬುದು ಕೂಡ ನಮಗೆಲ್ಲರಿಗೂ ಈಗ ಚೆನ್ನಾಗಿ ಗೊತ್ತಾಗಿರುವ ಸತ್ಯ. ಈ ಬಗ್ಗೆ ಕಾಳಜಿ, ಚಿಂತೆ ಇರುವವರನ್ನೂ ಗಾಢವಾಗಿ ಕಾಡುತ್ತಿರುವ ಪ್ರಶ್ನೆ ಎಂದರೆ

ಈ ನಿಟ್ಟಿನಲ್ಲಿ ನಾವೇನು ಮಾಡಬಹುದು?*✍

*ಪರಿಸರದ ಸಂರಕ್ಷಣೆ ಬಗ್ಗೆ ಗಮನಿಸಬೇಕಾದ ಅಂಶಗಳು*✍

* *ಜನಸಂಖ್ಯೆ - ಹೆಚ್ಚಳ-ಕಡಿತ ಹಾಗೂ ಅವರ ಒಟ್ಟಾರೆ ಬೇಡಿಕೆಯ ಮೇಲಿನ ಪರಿಣಾಮ*

* *ಆಹಾರ, ಕೃಷಿ - ಕೀಟನಾಶಕಗಳ ಬಳಕೆ, ಸಾವಯವ ಕೃಷಿಯ ಬೆಳವಣಿಗೆ, ಪ್ರಾಣಿಮೂಲ ಆಹಾರದಿಂದ ಪರಿಸರಕ್ಕೆ ಆಗುವ ಆಘಾತ*

* *ಜನರು, ಸಂಘ-ಸಂಸ್ಥೆಗಳು – ಪರಿಸರಕ್ಕೆ ಅವರ ಕೊಡುಗೆಗಳು, ಪಾತ್ರ ಹಾಗೂ ಅವರ ನೈಜ ಉದ್ದೇಶಗಳು*

* *ತ್ಯಾಜ್ಯ – ಉತ್ಪಾದನೆ, ಸಂಸ್ಕರಣೆ ಹಾಗೂ ವಿಲೇವಾರಿ*

* *ನೀರು – ಬಳಕೆಯ ಪ್ರಮಾಣ, ಮಳೆನೀರಿನ ಇಂಗುವಿಕೆಯ ಪ್ರಮಾಣ, ವಿವಿಧ ಮೂಲಗಳ ಸ್ಥಿತಿಗತಿ*

* *ಸ್ಥಳೀಯ ಸಂಸ್ಕೃತಿ, ಹಿರಿಯರ ಜೀವನಕ್ರಮ - ಅದರಲ್ಲಿರುವ ಒಳಿತು-ಕೆಡುಕುಗಳು (ಪರಿಸರದ ದೃಷ್ಟಿಯಿಂದ)*

* *ಇಂಧನ-ಶಕ್ತಿ – ಬಳಕೆಯ ಪ್ರಮಾಣ, ನವೀಕರಣಗೊಳ್ಳುವ ಮೂಲಗಳ ಶೇಕಡಾವಾರು ಕೊಡುಗೆ*

* *ನೆಲ - ಬಳಕೆಯಲ್ಲಿ ಆಗುತ್ತಿರುವ ವ್ಯತ್ಯಾಸಗಳು – ಕಾಡು ಕೃಷಿಭೂಮಿಯಾಗುವುದು, ಕೃಷಿಭೂಮಿ ನಿವೇಶನಗಳಾಗುವುದು.*

* *ಆರ್ಥಿಕತೆ - ಏರಿಳಿತದಿಂದ ಜನರ ಜೀವನಶೈಲಿ, ಅವರ ಬೇಡಿಕೆಗಳು ಹಾಗೂ ಪರಿಸರದ ಮೇಲೆ ಆಗುವ ಪರಿಣಾಮ.*

* *ಸ್ಥಳೀಯ ಪ್ರಾಣಿ-ಪಕ್ಷಿ-ಜಲಚರಗಳು – ಅವುಗಳ ಜೀವನಕ್ರಮ, ಅವುಗಳ ಉಳಿವಿಗೆ ಅವಶ್ಯವಾದ ಪರಿಸರ*

*ಪರಿಸರ ರಕ್ಷಣೆಗಾಗಿ ನಾವು ಮಾಡಲೇಬೇಕಾದ ಸಂಗತಿಗಳು*✍

*ಪುನರ್ ಬಳಕೆಯಂತ ವಸ್ತುಗಳನ್ನು ಸುಮ್ಮನೆ ಬಿಸಾಡಬೇಡಿ, ಮರುಬಳಕೆ ಮಾಡಿ. ನಿಮಗೆ ಬೇಡದಿದ್ದರೆ ಇತರರಿಗಾದರೂ ದಾನ ಮಾಡಿ. ತಿದಿನದ ಜೀವನದಲ್ಲಿ ಅಥವಾ ಸಮಾರಂಭಗಳ ಸಂದರ್ಭದಲ್ಲಿ ಸುಲಭದಲ್ಲಿ ಮಣ್ಣಾಗಿ ಹೋಗುವ ಪರಿಸರ ಸ್ನೇಹೀ ಉತ್ಪನ್ನಗಳನ್ನು ಬಳಸುವುದು. ಉದಾ: ಪ್ಲಾಸ್ಟಿಕ್ ಚೀಲದ ಬದಲು ಕಾಗದ ಅಥವಾ ಬಟ್ಟೆಯ ಚೀಲ, ಪ್ಲಾಸ್ಟರ್ ಆಫ್ ಪ್ಯಾರಿಸ್ ಬದಲು ಮಣ್ಣಿನ ಗಣೇಶ, ಪ್ಲಾಸ್ಟಿಕ್ ಗೋಣಿಗಳ ಬದಲು ಸೆಣಬಿನ ನಾರಿನ ಗೋಣಿ. ಎಸೆಯುವ ಸಂಸ್ಕೃತಿ'ಯ ಬದಲು 'ರಿಪೇರಿ ಸಂಸ್ಕೃತಿ'ಯನ್ನು ಅಳವಡಿಸಲು ಸಾಧ್ಯವೋ ಎಂಬುದನ್ನು ನೋಡಿ. ನೆಯಲ್ಲಿಯೇ ಜೈವಿಕ, ಹಸಿ ತ್ಯಾಜ್ಯಗಳ ಸಂಸ್ಕರಣೆ ಮಾಡಿ (ಉದಾ: ಅಡುಗೆಮನೆಯ ಆಹಾರ ತ್ಯಾಜ್ಯ, ಉದ್ಯಾನವನದ ಹಸಿರು ತ್ಯಾಜ್ಯ). ಇದರಿಂದ ನೀವು ಮನೆಯಲ್ಲಿಯೇ ಪರ್ಯಾಯ ಇಂಧನ ಅಥವಾ ಗೊಬ್ಬರ ತಯಾರಿಸಬಹುದು, ಬೀದಿಯಲ್ಲಿರುವ ದನಗಳು, ನಾಯಿಗಳು ಪ್ಲಾಸ್ಟಿಕ್ ತಿನ್ನುವುದನ್ನೂ ತಪ್ಪಿಸಬಹುದು. ಇದನ್ನು ಅಪಾರ್ಟ್ ಮೆಂಟಿನಲ್ಲಿರುವವರೂ ಮಾಡಬಹುದು.ಅಪಾಯಕಾರಿ ತ್ಯಾಜ್ಯಗಳನ್ನು ಮಕ್ಕಳ ಕೈಗೆ ಸಿಗದಂತೆ ಸಂಗ್ರಹಿಸಿ ಜಾಗ್ರತೆಯಾಗಿ ವಿಲೇವಾರಿ ಮಾಡಿ. ಉದಾ: ಟ್ಯೂಬ್ ಲೈಟುಗಳು, ಸಿ.ಎಫ್.ಎಲ್. ಬಲ್ಬುಗಳು, ಇಲೆಕ್ಟ್ರಾನಿಕ್ ಉಪಕರಣಗಳು ಅಥವಾ ಬಿಡಿಭಾಗಗಳು.ವಿಂಗಡನೆ ಮಾಡಿ ವಿಲೇವಾರಿ ಮಾಡುವ ಪ್ರಬುದ್ಧ ವ್ಯವಸ್ಥೆ ಇಲ್ಲದಿದ್ದಲ್ಲಿ ಅದಕ್ಕೋಸ್ಕರ ಒತ್ತಾಯಿಸಿ, ವಿಂಗಡನೆ ಮಾಡುವುದು ನಿಮ್ಮ ಜವಾಬ್ದಾರಿ, ಆದರೆ ಅದರ ಮುಂದಿನ ವ್ಯವಸ್ಥೆಯನ್ನು ಕೇಳುವುದು ನಿಮ್ಮ ಹಕ್ಕು. *ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನೇ ಹೆಚ್ಚಾಗಿ ಬಳಸಲು ಪ್ರಯತ್ನ ಮಾಡಿ. ಇದರಿಂದ ಪರಿಸರವೂ ಉಳಿಯುತ್ತದೆ, ದೇಶದ ಪೆಟ್ರೋಲಿಯಂ ಆಮದಿನ ಹೊರೆಯೂ ಕಮ್ಮಿಯಾಗುತ್ತದೆ. ನಿಮ್ಮ ಮನೆಯೊಳಗೆ ಉತ್ತಮ ಗಾಳಿ, ಬೆಳಕು ಇರುವಂತೆ ನೋಡಿಕೊಳ್ಳಿ, ಹಗಲು ಹೊತ್ತನ್ನು ಚೆನ್ನಾಗಿ ಉಪಯೋಗಿಸಿ. ಆಗ ಫ್ಯಾನ್, ವಾತಾನುಕೂಲಿ, ವಿದ್ಯುತ್ ದೀಪಗಳು, ಇವೆಲ್ಲದರಲ್ಲಿ ವಿದ್ಯುತ್ ಶಕ್ತಿಯನ್ನು ಉಳಿಸಬಹುದು. ನವೀಕರಿಸಲು ಸಾಧ್ಯವಿರುವ ಮೂಲಗಳನ್ನು

ಉಪಯೋಗಿಸಿ. ಉದಾ: ಸೋಲಾರ್ ನೀರಿನ ಹೀಟರ್, ಸೋಲಾರ್ ದೀಪಗಳು*

* *ಸಾಧ್ಯವಾದಾಗಲೆಲ್ಲಾ ರಾಸಾಯನಿಕ ಮುಕ್ತ, ಸಾವಯವ ಹಾಗೂ ಸಸ್ಯಮೂಲದ ಆಹಾರ ಪದಾರ್ಥಗಳನ್ನೇ ಖರೀದಿಸಿರಿ. ಇದರಿಂದ ಪರಿಸರಕ್ಕೂ ನಿರಾಳ, ನಿಮ್ಮ ಆರೋಗ್ಯಕ್ಕೂ ವರದಾನ.*

* *ಸುತ್ತಮುತ್ತಲೂ ಹಸಿರು ಹೆಚ್ಚುವಂತೆ ಪ್ರಯತ್ನ ಮಾಡಿ. ನಿಮ್ಮ ಹುಟ್ಟುಹಬ್ಬದಂದು, ಇತರ ವಿಶೇಷ ದಿನಗಳಂದು ಗಿಡ ನೆಡುವ ಕಾರ್ಯ ಕೈಗೊಳ್ಳಿ, ಅದನ್ನು ನೀರೆರೆದು ಪೋಷಿಸಲು ಮರೆಯಬೇಡಿ.*

* *ಇಂಗು ಗುಂಡಿಗಳನ್ನು ಸ್ಥಾಪಿಸಿ. ಮನೆಯ ಸುತ್ತಮುತ್ತಲೂ ಹರಿದು ಪೋಲಾಗಿಹೋಗುವ ಮಳೆನೀರನ್ನು ಇಂಗಿಸಲು ವ್ಯವಸ್ಥೆ ಕಲ್ಪಿಸಲು ಸಾಧ್ಯವಾದರೆ ಮಾಡಿ.*

*ಹೆಚ್ಚಿಗೆ ಮಾಡಬಹುದಾದ ಸಂಗತಿಗಳು*✍

* *ಸಸ್ಯಜನ್ಯ ಆಹಾರಕ್ಕೆ ಹೆಚ್ಚಿನ ಒತ್ತುಕೊಡಿ.*

* *ನಿಮ್ಮ ಜನಪ್ರತಿನಿಧಿಗಳನ್ನು ಪರಿಸರ ಪ್ರೇಮಿಗಳಾಗಲು ಒತ್ತಾಯಿಸ*ಿ

* *ಜನಸಂಖ್ಯೆಯನ್ನು ನಿಯಂತ್ರಣ*

* *ಸ್ಥಳೀಯ ಯೋಜನೆಗಳ ಬಗ್ಗೆ ಜಾಗೃತರಾಗಿರಿ, ಅಗತ್ಯ ಬಿದ್ದಲ್ಲಿ ಕೈಜೋಡಿಸಿ ಪರಿಸರ ಸಂರಕ್ಷಣೆಗಾಗಿ ಹೋರಾಡಿ.*

* *ಸ್ಥಳೀಯ ಉತ್ಪನ್ನಗಳನ್ನೇ ಖರೀದಿಸಿ, ಅವುಗಳ ಕಾರ್ಬನ್ ಫುಟ್ ಪ್ರಿಂಟ್ ಕಡಿಮೆ ಇರುತ್ತದೆ, ಇದು ಸ್ಥಳೀಯ ಆರ್ಥಿಕತೆಗೂ ಒಳ್ಳೆಯದು.*

* *ಪರಿಸರಕ್ಕೆ ಪೂರಕವಾಗಿ ಕೆಲಸ ಮಾಡುವ ಸಂಘ-ಸಂಸ್ಥೆ ಅಥವಾ ವ್ಯಕ್ತಿಗಳನ್ನು ಎತ್ತಿಹಿಡಿಯಿರಿ,*

* *ಮರಗಳನ್ನು ಕಡಿಯುವುದರ ಬದಲು ಸ್ಥಳಾಂತರಿಸುವುದು*

••••• ಮಾಹಿತಿ ವೇದಿಕೆ ••••••••

# ವಿಶ್ವದ ಅತೀ ಸಣ್ಣ ದೇಶಗಳ ಬಗ್ಗೆ ನಿಮಗೆಷ್ಟು ಗೊತ್ತು?

## ವ್ಯಾಟಿಕನ್ ಸಿಟಿ

: ವ್ಯಾಟಿಕನ್ ಸಿಟಿ: ಈ ದೇಶದ ಒಟ್ಟು ವಿಸ್ತೀರ್ಣ 1/2 ಸ್ಕ್ವೇರ್ ಮೈಲಿಗಿಂತಲೂ ಕಡಿಮೆ ಇದೆ. ಇಲ್ಲಿನ ಜನಸಂಖ್ಯೆ 850 ಎಂದು ಅಂದಾಜಿಸಲಾಗಿದ್ದು, ಜಗತ್ತಿನ ಅತೀ ಚಿಕ್ಕ ದೇಶ ಎಂಬ ಹೆಗ್ಗಳಿಕೆ ಇದರದು.

## ಟುವಾಲು

ಟುವಾಲು ಜಗತ್ತಿನ ಎರಡನೇ ಅತೀ ಚಿಕ್ಕ ದೇಶವಾಗಿದೆ. ಈ ದೇಶದ ಜನಸಂಖ್ಯೆ 11,000.

## ಮಾಲ್ಟಾ ದೇಶವು 316 km² ವಿಸ್ತೀರ್ಣ

ಮಾಲ್ಟಾ ದೇಶವು 316 km² ವಿಸ್ತೀರ್ಣ ಹೊಂದಿದೆ. ಇಲ್ಲಿಯ ಜನಸಂಖ್ಯೆ 450,000 ಎಂದು ಅಂದಾಜಿಸಲಾಗಿದೆ.

## ಲಿಚ್ಟೆನ್‌ಸ್ಟೀನ್

ಲಿಚ್ಟೆನ್‌ಸ್ಟೀನ್ : ಯುರೋಪ್‌ನ ಈ ದೇಶವು ಸ್ವಿಜರ್ಲ್ಯಾಂಡ್ ಹಾಗೂ ಆಸ್ಟ್ರೇಲಿಯಾ ಮಧ್ಯೆ ನೆಲೆಸಿದೆ. ಈ ದೇಶದ ವಿಸ್ತೀರ್ಣ 63ಸ್ಕ್ವೇರ್ ಮೈಲಿಗಿಂತಲೂ ಕಡಿಮೆ ಇದೆ.

## ಮೊನಾಕೊ

ಮೊನಾಕೊ ದೇಶ ಸುಮಾರು 36,000 ಜನಸಂಖ್ಯೆ ಹೊಂದಿದೆ. ಇದು ಜಗತ್ತಿನ ಅತೀ ಜನನಿಬಿಡ ದೇಶವಾಗಿದೆ. ಫಾರ್ಮುಲ 1 ರೇಸಸ್‌ಗೆ ಈ ದೇಶ ಫೇಮಸ್.

## ಸೇಂಟ್ ಕಿಟ್ಸ್ ಮತ್ತು ನೆವಿಸ್

ಸೇಂಟ್ ಕಿಟ್ಸ್ ಮತ್ತು ನೆವಿಸ್: ಈ ದೇಶಕ್ಕೆ 1983ರಲ್ಲಿ ಸ್ವಾತಂತ್ರ್ಯಸಿಕ್ಕಿತ್ತು. ನೆವಿಸ್ ಅತೀ ಚಿಕ್ಕ ದ್ವೀಪವಾಗಿದೆ. ಇದು ಫೇಮಸ್ ಪ್ರವಾಸಿ ತಾಣವೂ ಆಗಿದೆ.

## ನೌರು:

ನೌರು: ಪೆಸಿಫಿಕ್ ಸಾಗರ ದಕ್ಷಿಣ ಭಾಗದಲ್ಲಿನ ಈ ಚಿಕ್ಕ ದ್ವೀಪವೇ ನೌರು ದೇಶ. ಇದರ ಒಟ್ಟುವಿಸ್ತೀರ್ಣ ಕೇವಲ 21 ಕಿಮೀ.

## ಸ್ಯಾನ್ ಮರಿನೋ

ಸ್ಯಾನ್ ಮರಿನೋ ದೇಶದ ಒಟ್ಟು ವಿಸ್ತೀರ್ಣ 61 ಸ್ಕೇರ್ ಕಿಲೋ ಮೀಟರ್ಸ್. ಇಲ್ಲಿನ ಜನಸಂಖ್ಯೆ 30,000.

## ಗ್ರೆನಡಾ:

ಗ್ರೆನಡಾ: 1974ರಲ್ಲಿ ಈ ದೇಶವು ಅಮೆರಿಕಾದಿಂದ ಬೇರ್ಪಟ್ಟು ಸ್ವತಂತ್ರ ದೇಶವಾಗಿ ನೆಲೆನಿಂತಿದೆ. ಈ ದೇಶದ ಜನಸಂಖ್ಯೆ 90,000.

## ಮಾಲ್ಡೀವ್ಸ್:

ಮಾಲ್ಡೀವ್ಸ್: ಇದನ್ನ ಹಿಂದೂ ಮಹಾಸಾಗರದ ಮುತ್ತು ಎಂದು ಕರೆಯುತ್ತಾರೆ. ಈ ದ್ವೀಪದ ವಿಸ್ತೀರ್ಣ 298 ವರ್ಗ ಕಿಲೋಮೀಟರ್.

°°°°° ಮಾಹಿತಿ ವೇದಿಕೆ °°°°°°°°

## ಸ್ವಚ್ಛ ಭಾರತದ ನಿರ್ಮಾಣ ಹೇಗೆ ಸಾಧ್ಯ?

'WE MUST NOT ONLY KNOW WHAT TO DO AND HOW TO DO BUT ALSO WHAT NOT TO DO AND WHY NOT.ಇದು ಎಡ್ನಾಮಿಲ್ಲೇ ಎಂಬಾಕೆ Few Figs from Thistles ಕೃತಿಯ ಸಾಲು. ನ್ಯಾಷನಲ್ ಸ್ಯಾಂಪಲ್ ಸರ್ವೆ ಪ್ರಕಟಿಸಿದ ಅಂಕಿ ಅಂಶಗಳ ಪ್ರಕಾರ ಶೇ.59ರಷ್ಟು ಭಾರತದ ಹಳ್ಳಿಯ ಜನರಿಗೆ ಈಗಲೂ ಬಯಲೇ ಶೌಚಾಲಯ. ಕಂಡಲ್ಲಿ ಉಗುಳುವುದು, ಘನ ತ್ಯಾಜ್ಯಗಳ ರಾಶಿ, ಪ್ಲಾಸ್ಟಿಕ್ ಕಸದ ರಾಶಿ, ಕೊಳಚೆ ಪ್ರದೇಶಗಳು, ಗಬ್ಬು ವಾಸನೆಗಳಿಂದಾಗಿ ಭಾರತಕ್ಕೆ ಜಗತ್ತಿನ ಅತ್ಯಂತ ಕೊಳಕು ದೇಶಗಳಲ್ಲೊಂದು ಎಂಬ ಕುಖ್ಯಾತಿಯಿದೆ. "ಕ್ಲೀನ್ ಸಿಟಿ ಗ್ರೀನ್ ಸಿಟಿ" ಕಲ್ಪನೆ ಇನ್ನೂ ಸಾಕಾರಗೊಂಡಿಲ್ಲ. ದೇಶದ ಅಭಿವೃದ್ಧಿ ಗಾಥೆಯಲ್ಲಿ ನಮ್ಮ ತ್ಯಾಜ್ಯ ನಿರ್ವಹಣೆಯ ಸೋಲು ಒಂದು ಕರಾಳ ಅಧ್ಯಾಯ. 2040ರ ಹೊತ್ತಿಗೆ ನಮ್ಮ ದೇಶದ ನಗರಗಳ ಜನಸಾಂದ್ರತೆ ವಿಪರೀತ ಹೆಚ್ಚಲಿದೆ. ರಾಷ್ಟ್ರ್ಯದಾಯದಲ್ಲಿ ಶ್ರೀಮಂತ ರಾಷ್ಟ್ರಗಳ ಪಟ್ಟಿಗೆ ಸೇರದಿದ್ದರೂ 2100ರ ಹೊತ್ತಿಗೆ ಭಾರತ ಅಂಥ ರಾಷ್ಟ್ರಗಳು ಉತ್ಪಾದಿಸುವ ಒಟ್ಟು ತ್ಯಾಜ್ಯದ ಶೇ.70ರಷ್ಟು ತ್ಯಾಜವನ್ನು ತಾನೊಂದೇ ಉತ್ಪತ್ತಿ ಮಾಡಲಿದೆ. ಇದು ಪ್ರಸಿದ್ಧ ನಿಯತಕಾಲಿಕೆ "ನೇಚರ್" ವರದಿ ಮಾಡಿರುವ ಸಂಗತಿ.ಪರದೇಶಕ್ಕೆ ಹೋಗಿ ಬಂದವರೆಲ್ಲಾ ವಾಕರಿಸುವುದು ನಮ್ಮಲ್ಲಿರುವ ಶುಚಿತ್ವದ ಕೊರತೆಯ ಬಗ್ಗೆಯೇ. ಕೊಳಚೆ ಪ್ರದೇಶಗಳು ನಮ್ಮ ನಗರಗಳ ಅವಿಭಾಜ್ಯ ಅಂಗ. ಇನ್ನು ಪ್ರವಾಸಿ ತಾಣಗಳಲ್ಲಂತೂ ಕಸದ್ದೇ ರಾಶಿ. ನಮ್ಮಲ್ಲಿ ಸುತ್ತಮುತ್ತಲ ಪರಿಸರ ರಕ್ಷಣೆ ಬಗ್ಗೆ ಮಾತು ಜಾಸ್ತಿ, ಕೃತಿ ಕಡಿಮೆ. ಇನ್ನೊಂದೆಡೆ, ಕಾರ್ಖಾನೆಗಳಿಂದ ಬರುವ ತ್ಯಾಜ್ಯಗಳು ನೇರವಾಗಿ ನದಿಗಳನ್ನು ಸೇರುತ್ತಿವೆ. ಕಾರ್ಖಾನೆಗಳು ತ್ಯಾಜ್ಯವನ್ನು ಶುದ್ಧೀಕರಿಸಿ ಬಿಡಬೇಕು ಎಂಬ ನಿಯಮದಿಂದ ಯಾವ ಪ್ರಯೋಜನವೂ ಆಗಿಲ್ಲ.ಗಂಗಾನದಿ ಶುದ್ಧೀಕರಿಸಲು ಕೋಟಿಗಟ್ಟಲೆ ಹಣ ಈಗಾಗಲೇ ವ್ಯಯವಾಗಿದೆ. ಇನ್ನೂ ಆಗುತ್ತದೆ. ನಮ್ಮ ಪಟ್ಟಣದಲ್ಲಿನ ತ್ಯಾಜ್ಯವಸ್ತುಗಳನ್ನು ಪಟ್ಟಣದ ಹೊರಗಿನ ಹಳ್ಳಿಯಲ್ಲಿ ತುಂಬಿಸುವ ಪ್ರಯತ್ನ ನಡೆಯುತ್ತಿದೆ. ಬೆಂಗಳೂರಿನಲ್ಲಿ ಇದರ ಬಗ್ಗೆ ಪ್ರತಿಭಟನೆಗಳಾಗುತ್ತಿವೆ. ಮಂಗಳೂರಿನ ಕತೆಯೂ ಭಿನ್ನವಲ್ಲ. ದಿನಕ್ಕೆ 120 ಟನ್ ತ್ಯಾಜ್ಯ ವಿಲೇವಾರಿ ಮಾಡುವ ಸಾಮರ್ಥ್ಯ ಹೊಂದಿರುವ ಈ ನಗರದಲ್ಲಿ ಪ್ರತಿದಿನ ಸೃಷ್ಟಿಯಾಗುವ ತ್ಯಾಜ್ಯ 200 ಟನ್.

ನಮ್ಮ ನೆರೆಯ ಬಾಂಗ್ಲಾದೇಶ ಅನೇಕ ಸಮಸ್ಯೆಗಳ ಮಧ್ಯೆಯೂ ಶೌಚಾಲಯ ಬಳಕೆಯಲ್ಲಿ ನಮಗಿಂತ ಸಾಕಷ್ಟು ಮುಂದಿದೆ. ಅಲ್ಲಿ ಬಯಲು ಶೌಚಕ್ಕೆ ಹೋಗುವವರ ಪ್ರಮಾಣ 2010ರಲ್ಲಿ ಶೇ.4ಕ್ಕೆ ಇಳಿದಿದೆ. ಶ್ರೀಲಂಕಾದಲ್ಲೂ ಪರಿಸ್ಥಿತಿ ಉತ್ತಮವಾಗಿದೆ. ಅಲ್ಲಿ ಶೇ.90ರಷ್ಟು ಜನ ಶೌಚಾಲಯ ಬಳಸುತ್ತಾರೆ. ಆರ್ಥಿಕತೆಯಲ್ಲಿ ಈ ದೇಶಗಳಿಗಿಂತ ಮುಂದಿರುವ ನಮಗೇಕೆ ನಿರ್ಮಲ ರಾಷ್ಟ್ರ ನಿರ್ಮಿಸಲು ಸಾಧ್ಯವಾಗಿಲ್ಲ? ಕಾರಣ ನಾವೇ. ನಮ್ಮಲ್ಲಿರುವ ಉದಾಸೀನ ಮನೋಭಾವವೇ ಇದಕ್ಕೆಲ್ಲ ಕಾರಣ.ನಾವೊಬ್ಬರು ನಮ್ಮ ಸುತ್ತಲಿನ ಪರಿಸರವನ್ನು ಸ್ವಚ್ಛವಾಗಿಟ್ಟುಕೊಂಡರೆ ದೇಶ ಸ್ವಚ್ಛವಾಗುತ್ತದೆಯೇ ಎಂದು ಬಹಳ ಜನ ಕೇಳುತ್ತಾರೆ. ಖಂಡಿತ ಸ್ವಚ್ಛವಾಗುತ್ತದೆ. ಎಲ್ಲರೂ ತಮ್ಮ ಮನೆ ಸುತ್ತಮುತ್ತಲನ್ನು ಶುಚಿಯಾಗಿಟ್ಟುಕೊಂಡರೆ ಸ್ವಚ್ಛ ಭಾರತದ ನಿರ್ಮಾಣ ಸಾಧ್ಯ. ಕಳೆದ 65 ವರ್ಷಗಳಿಂದಲೂ ಇದನ್ನು ಹೇಳುತ್ತ ಬಂದಿದ್ದೇವೆ. ಆದರೂ ನಮ್ಮಿಂದ ಇದು ಸಾಧ್ಯವಾಗಿಲ್ಲ. ಹಾಗಾಗಿಯೇ 2014ರಲ್ಲೂ ಈಗಿನ ಸರ್ಕಾರ ಸ್ವಚ್ಛ ಭಾರತ ಅಭಿಯಾನ ಕೈಗೊಳ್ಳಬೇಕಾಗಿ ಬಂದಿದೆ.

ಕೇಂದ್ರ ಸರ್ಕಾರ ಎರಡು ಲಕ್ಷ ಕೋಟಿ ರೂ. ವ್ಯಯಿಸಿ ಸುಮಾರು 11 ಕೋಟಿ ಶೌಚಾಲಯಗಳನ್ನು ಕಟ್ಟುವ ಗುರಿ ಹಾಕಿಕೊಂಡಿದೆ. ತಡವಾಗಿಯಾದರೂ ಎಚ್ಚೆತ್ತುಕೊಂಡಿದ್ದೇವೆ.

## ಮತ್ತೆ ಮೈಮರೆತರೆ ಕಷ್ಟ

ಈ ಅಭಿಯಾನ ಫಲಪ್ರದವಾಗಬೇಕಾದರೆ ಪ್ರತಿಯೊಬ್ಬ ಪ್ರಜೆ ಇದರಲ್ಲಿ ತೊಡಗಿಸಿಕೊಳ್ಳಬೇಕು. ನಮ್ಮ ಮೈಂಡ್‌ಸೆಟ್ ಬದಲಾಗಬೇಕು. ಈಗಾಗಲೆ ಸ್ವಚ್ಛ ನಗರಕ್ಕೆ ಸಂಬಂಧಿಸಿದ ಯೋಜನೆಗಳು ಬೇಕಾದಷ್ಟು ಇವೆ. ಉದಾಹರಣೆಗೆ ಪ್ಲಾಸ್ಟಿಕ್ ಮುಕ್ತ ನಗರದ ಕನಸು - ಬರೀ ನಾಮಫಲಕಗಳಿಗೆ ಸೀಮಿತವಾಗಿದೆ. ಕ್ಲೀನ್ ಸಿಟಿ ಗಾರ್ಬೇಜ್ ಸಿಟಿಯಂತಿದೆ. ವೇಸ್ಟ್ ಬಿನ್‌ಗಳೇ ವೇಸ್ಟ್ ಎಂಬಂತೆ ತ್ಯಾಜ್ಯ ಸಂಗ್ರಹ-ನಿರ್ವಹಣೆ ನಡೆಯುತ್ತಿದೆ. ಉತ್ತಮ ರೀತಿಯಲ್ಲಿ ತ್ಯಾಜ್ಯ ನಿರ್ವಹಣೆ, ಮರು ಸಂಸ್ಕರಣೆ ಆದರ ಮಾತ್ರ ನಮ್ಮ ಗ್ರಾಮ, ನಗರಗಳು, ಊರು ಕೇರಿಗಳು, ರಸ್ತೆ ಬೀದಿಗಳು, ಅವುಗಳ ಬದಿಗಳು, ಕಟ್ಟಡಗಳು, ವನ ಉದ್ಯಾನಗಳು, ನದಿ ಸರೋವರಗಳು ಸ್ವಚ್ಛವಾಗುತ್ತವೆ. ಸ್ವಚ್ಛತೆ ಒಂದು ಸಹಜ ಗುಣ. ಆದರೆ ನಮ್ಮಲ್ಲದು ಮೈಗೂಡಿಲ್ಲ. ಸ್ವಚ್ಛ ಮಾಡುವುದು ಗಲೀಜು ಕೆಲಸ ಎಂಬ ಕೀಳರಿಮೆ ಮೊದಲು ನಮ್ಮ ಮನಸ್ಸಿನಿಂದ ಹೊರಹೋಗಬೇಕು.

ಮಕ್ಕಳು ಮತ್ತು ಯುವಜನರೇ ಹೆಚ್ಚಾಗಿರುವ ನಮ್ಮ ರಾಷ್ಟ್ರದಲ್ಲಿ ಸ್ವಚ್ಛತೆಯ ಬಗೆಗಿನ ಪಾಠ ಸಣ್ಣ ಮಕ್ಕಳಿಂದಲೇ ಪ್ರಾರಂಭಗೊಳ್ಳಬೇಕು. ಇದು ದೀರ್ಘಾವಧಿಯಲ್ಲಿ ಪೂರಕವಾಗಿ ಕೆಲಸ ಮಾಡಬಹುದು. ಸ್ವಚ್ಛತೆಯ ಬಗ್ಗೆ ಜನರಲ್ಲಿ ತಿಳಿವಳಿಕೆ ಮೂಡಿಸುವುದು ಅತೀ ಅಗತ್ಯ. ಹಳ್ಳಿ ಪ್ರದೇಶಗಳಲ್ಲಿ ಸ್ವಸಹಾಯ ಗುಂಪುಗಳು ಈ ಯೋಜನೆಯಲ್ಲಿ ಈಗಾಗಲೇ ತೊಡಗಿಸಿಕೊಂಡಿವೆ. ಸ್ವಚ್ಛತೆ ಕಾಪಾಡುವಲ್ಲಿ ವಿಫಲರಾದವರಿಗೆ ದಂಡ ವಿಧಿಸುವ ಮೂಲಕ ಸಾಮಾಜಿಕ ಜವಾಬ್ದಾರಿಯನ್ನು ನೆನಪಿಸಬೇಕಾಗಿದೆ.

••••• ಮಾಹಿತಿ ವೇದಿಕೆ ••••••••

## ತ್ಯಾಜ್ಯ ವಿಲೇವಾರಿ ಹೀಗಲ್ಲ

ನಮ್ಮ ನಗರಗಳಲ್ಲಿ ಇನ್ನಷ್ಟು ತ್ಯಾಜ್ಯ ವಸ್ತುಗಳ ಸಂಸ್ಕರಣಾ ಘಟಕಗಳ ಅಗತ್ಯವಿದೆ. ಅವು ಸ್ವಲ್ಪ ದುಬಾರಿಯಾಗಬಹುದು, ಆದರೆ ಅನಿವಾರ್ಯ. ಮೋದಿ ಕಸ ಗುಡಿಸಿದ ದಿನ ತಾವೂ ಕಸ ಗುಡಿಸಿ ಸಂಭ್ರಮಿಸಿದ ಜನರ ಸೇವೆ ನಿರಂತರವಾಗಿ ಸಾಗಬೇಕಾಗಿದೆ. ಇಲ್ಲವಾದಲ್ಲಿ "ಮೇಕ್ ಇನ್ ಇಂಡಿಯಾ' ಮತ್ತು "ಶುಭ್ರ ಭಾರತದ ಸಂಕಲ್ಪ' ಈ ಎರಡೂ ಯೋಜನೆಗಳು ಪರಸ್ಪರ ವಿರುದ್ಧವಾಗಿ ಚಲಿಸುತ್ತವೆ. ಅಭಿವೃದ್ಧಿಗಾಗಿ ಹೂಡಿಕೆದಾರರಿಗೆ ಮಣೆ ಹಾಕುವಾಗ ಸ್ವಚ್ಛ ಭಾರತದ ಸಂಕಲ್ಪಕ್ಕೆ ಅಡ್ಡಿಯಾಗದಂತೆ ನೋಡಿಕೊಳ್ಳಬೇಕಾದ ಜವಾಬ್ದಾರಿ ಸರ್ಕಾರದ್ದು. ನಾವು ಸ್ವಾವಲಂಬಿಗಳಾಗಬೇಕು. ಆದರೆ ನಮ್ಮ ಪರಿಸರವನ್ನು ನಾಶಗೊಳಿಸಿ ಅಲ್ಲ.

## ಈ ಆಂದೋಲನ ನಿರಂತರ

ಪರಿಸರ ಸಂರಕ್ಷಣೆ ಅಭಿವೃದ್ಧಿಯ ಆಧಾರ ಸ್ತಂಭ. ಸರ್ಕಾರ, ಸಾರ್ವಜನಿಕರು, ಜನಪ್ರತಿನಿಧಿಗಳು, ಸ್ವಯಂ ಸೇವಾ ಸಂಸ್ಥೆಗಳು, ಸಾಮಾಜಿಕ ಕಾರ್ಯಕರ್ತರು, ಶಾಲಾ-ಕಾಲೇಜು ವಿದ್ಯಾರ್ಥಿಗಳು, ಪ್ರಮುಖವಾಗಿ ಕಾರ್ಪೊರೇಟ್ ವಲಯದ ಸಹಭಾಗಿತ್ವದಿಂದ ಈ ಯೋಜನೆ ಸಾಕಾರಗೊಳ್ಳುವುದು ಸುಲಭ ಸಾಧ್ಯ. ಜತೆಗೆ ಬೇರೆ ದೇಶಗಳಲ್ಲಿ ಇರುವಂತೆ ಪರಿಸರ ನೈರ್ಮಲ್ಯಕ್ಕೆ ಉತ್ತೇಜನ, ಮಾಲಿನ್ಯಕ್ಕೆ ನಿರುತ್ತೇಜನ (ಉದಾ: ಮಾಲಿನ್ಯ ತೆರಿಗೆ, ಉತ್ಪನ್ನ ತೆರಿಗೆ ಇತ್ಯಾದಿ) ತೋರುವ ಬಿಗು ಕ್ರಮಗಳೂ ಅಗತ್ಯ. ಕೈಯಲ್ಲಿ ಒಂದು ಚಿಕ್ಕ ಕಸವಿದ್ದರೂ ಕಸದ ಬುಟ್ಟಿ ಸಿಗುವವರೆಗೆ ಅದನ್ನು ರಸ್ತೆಗೆಸೆಯದಿರುವ ಸಂಕಲ್ಪ ನಮ್ಮ ಅಭ್ಯಾಸವಾಗಬೇಕು.

ಅಸ್ವಚ್ಛತೆಯನ್ನು ರಾಷ್ಟ್ರೀಯ ವಿಪತ್ತು ಎಂದು ಪರಿಗಣಿಸಬೇಕಾದ ಸಮಯ ಬಂದಿದೆ. ಆಕ್ಟೋಬರ್ 2, 2014ರಂದು ಸ್ವಚ್ಛ ಭಾರತದ ಮಂತ್ರ ಪಠಿಸಿದ ನಾವು ಅಕ್ಟೋಬರ್ 2, 2015ರಂದು ಮತ್ತೊಮ್ಮೆ ಅದನ್ನು ನೆನಪಿಸಿಕೊಳ್ಳುವುದಲ್ಲ. ಪ್ರತಿದಿನವೂ ಅದು ನೆನಪಿನಲ್ಲಿರಬೇಕು. ಜಾಗತಿಕ ತಾಪಮಾನ ಏರಿಕೆ, ಜೀವ ವೈವಿಧ್ಯನಾಶದಂತಹ ಸಮಸ್ಯೆಗಳಿಗೆ ಶೃಂಗ ಸಮ್ಮೇಳನಗಳನ್ನು ಏರ್ಪಡಿಸುವ, ಅವುಗಳಲ್ಲಿ ಭಾಗವಹಿಸುವ ನಾವು ಸ್ಥಳೀಯ ಸಮಸ್ಯೆಗಳಿಗೂ ಗಮನ ಕೊಡುವುದು ಅಗತ್ಯ. ಎಡ್ನಾ ಅವರ ಮಾತಿನಂತೆ ಪ್ರಕೃತಿಯೊಂದಿಗೆ ಏನು ಮಾಡಬೇಕು, ಏನು ಮಾಡಬಾರದು ಎಂಬುದು ನಮಗೆ ಗೊತ್ತಿರಬೇಕು.

"ಮೇಕ್ ಇನ್ ಇಂಡಿಯಾ; ಇನ್ ಮೈ ಕ್ಲೀನ್ ಇಂಡಿಯಾ' ಅಲ್ಲದೇ ಪ್ರತಿ ಕೆಲಸದ ಬಳಿಕವೂ "ಕೀಪ್ ಇಟ್ ಆಲ್ವೇಸ್ ಕ್ಲೀನ್' ಎಂಬುದು ಕಂಡುಬರಬೇಕು. ಈಗಾಗಲೇ ಇದಕ್ಕೆ ವಿವಿಧ ರಂಗಗಳ "ಹೀರೋ'ಗಳು ಓಗೊಡುತ್ತಿ̈ಾರೆ. ಆದರೆ ಸ್ಟಾರ್ ಪ್ರಚಾರಕ್ಕೆ ಹೊರತಾದ ಅಭಿಯಾನ ಇದಾಗಬೇಕು. ಪರಿಸರ ಸ್ನೇಹಿ ಚಟುವಟಿಕೆಗಳು, ಸಲಕರಣೆಗಳು, ಉತ್ಪನ್ನಗಳು ನಮ್ಮ ಜೀವನ ಸಾಧನಗಳಾಗಬೇಕು. ಅವೈಜ್ಞಾನಿಕ, ಪರಿಸರ ಹಾನಿಕಾರಕ, ಅಪಾಯಕಾರಿ ವಿಧಾನಗಳಿಂದ ಕಸವನ್ನು ನಿರ್ವಹಿಸುವುದೂ ತಪ್ಪು. ದೇಹ-ಮನಸ್ಸು-ಆತ್ಮ ಆಹಾರ ಶುಚಿಯಾಗಲೆಂದು ಬಯಸಿ, ಹಬ್ಬಗಳನ್ನು ಆಚರಿಸಿ, ದೇವರನ್ನು ಆರಾಧಿಸಿ, ಪ್ರಸಾದ ಸ್ವೀಕರಿಸಿ, ಸುತ್ತಮುತ್ತಲಿನ ಪರಿಸರವನ್ನು ಮತ್ತೆ ಇದ್ದ ಶುದ್ಧ ಸ್ಥಿತಿಗೆ ಮರಳಿ ತರುವುದನ್ನು ಮರೆತುಬಿಡುವ ಸ್ವಭಾವವನ್ನು ಜಾಡಿಸಿ ಬೀಸಿ ಒಗೆಯುವುದು ಯಾವತ್ತು ನಮ್ಮಿಂದ ಸಾಧ್ಯವೋ ಆವತ್ತು ಸ್ವಚ್ಛ ಭಾರತ ನಿರ್ಮಾಣವಾಗುತ್ತದೆ.

••••• ಮಾಹಿತಿ ವೇದಿಕೆ ••••••••

## ಬಾಲ್ಯ ವಿವಾಹ

ಬಾಲ್ಯವಿವಾಹ ತಡೆ ಕಾಯಿದೆ, 1929 ರ ಪ್ರಕಾರ ಬಾಲ್ಯ ಎಂದರೆಗಂಡಿಗೆ 21 ವರ್ಷ ವಯಸ್ಸು ಹೆಣ್ಣುಮಗುವಿಗೆ ೧೮ ವರ್ಷ ಗಳಿಗಿಂತ ಕಡಮೆ ವಯಸ್ಸು (ಪ್ರಕರಣ 2(a)).

ಈ ಕಾಯಿದೆಯ ಅಡಿಯಲ್ಲಿ ಬರುವ ಅನೇಕರು ಶೀಕ್ಷಾರ್ಹರಾಗುವರು,

ಬಾಲ್ಯ ವಿವಾಹದ ಒಪ್ಪಂದಮಾಡಿಕೊಳ್ಳುವವರು,
ನೆರವೇರಿಸುವವರು ,ಭಾಗಿಯಾಗುವವರು .ಅವರು ಕೇಳಗಿನಂತೆ ಇರುವರು :

ಒಬ್ಬಗಂಡಸು ಬಾಲ್ಯ ವಿವಾಹದ ಒಪ್ಪಂದ ಮಾಡಿಕೊಂಡರೆ, ಅವನು ೧೮ ವರ್ಷದ ಮೇಲೆ ೨೧ ವರ್ಷ ಒಳಗಿನ ವಯಸ್ಸಿನವನಾಗಿದ್ದರೆ ೧೫ ದಿನದ ವರೆಗಿನ ಸಾಮಾನ್ಯ ಸೆರೆವಾಸ ಅಥವ ೧೦೦೦ ರೂಪಾಯಿವರೆಗೆ ದಂಡ ಅಥವ ಎರಡೂ ಶಿಕ್ಷೆಗೆ ಗುರಿಯಾಗಬಹುದು. (ಪ್ರಕರಣ 3).

ಒಬ್ಬಗಂಡಸು ಬಾಲ್ಯ ವಿವಾಹದ ಒಪ್ಪಂದ ಮಾಡಿಕೊಂಡರೆ, ಅವನು ೨೧ ವರ್ಷದ ಮೇಲಿನ ವಯಸ್ಸಿನವನಾಗಿದ್ದರೆ ೩ ತಿಂಗಳವರೆಗಿನ ಸಾಮಾನ್ಯ ಸೆರೆವಾಸ ಮತ್ತು ದಂಡ ಅಥವ ಎರಡೂ ಶಿಕ್ಷೆಗೆ ಗುರಿಯಾಗಬಹುದು. (ಪ್ರಕರಣ 4 ).

ಒಬ್ಬವ್ಯಕ್ತಿಯು ಬಾಲ್ಯವಿವಾಹವನ್ನು ನೆರವೇರಿಸಿದರೆ ಅದು ಬಾಲ್ಯವಿವಾಹ ಎಂದು ನಂಬಲು ಕಾರಣವಿಲ್ಲ ಎಂದು ನಿರೂಪಿಸದಿದ್ದರೆ ಅವನಿಗೆ ತಿಂಗಳವರೆಗಿನ ಸಾಮಾನ್ಯ ಸೆರೆವಾಸ ಮತ್ತು ದಂಡ ಅಥವ ಎರಡೂ ಶಿಕ್ಷೆಗೆ ಗುರಿಯಾಗಬಹುದು. (ಪ್ರಕರಣ 5 )

ತಾಯಿ ತಂದೆಯರು ಅಥವ ಪೋಷಕರು ಮಗುವಿನ ಮದುವೆಗೆ ಅನುಮತಿಸಿದರೆ ಬೇಜಬ್ದಾರಿಯಿಂದ ತಡೆಯಲು ವಿಫಲರಾದರೆ ಅಥವ ಆ ಮದುವೆಯನ್ನು ಉತ್ತೇಜಿಸಿದರೆ ಶಿಕ್ಷಾರ್ಹನಾಗುವನು (ಪ್ರಕರಣ 6).

### ಬಾಲ್ಯ ವಿವಾಹವನ್ನು ನಿಲ್ಲಿಸಬಹುದಾ?

ಬಾಲ್ಯ ವಿವಾಹವನ್ನು, ಬಾಲ್ಯ ವಿವಾಹ ತಡೆ ಕಾಯಿದೆ , 1929 ಪ್ರಕಾರ ಯಾರಾದರು ಪೋಲೀಸರಿಗೆ ಈ ರೀತಿಯ ಮದುವೆಯ ವ್ಯವಸ್ಥೆಯಾಗಿದೆ ಅಥವ ನಡೆಯಲಿದೆ ಎಂದು ದೂರು ನೀಡಿದರೆ, ಪೋಲೀಸರು ವಿಚಾರಣೆ ನಡೆಸಿ ವಿಷಯವನ್ನು ಮ್ಯಾಜಿಸ್ಟ್ರೇಟರಲ್ಲಿಗೆ ಒಯ್ಯುವರು. ಅವರು ಮದುವೆ ನಿಲ್ಲಿಸಲು ತಿಳಿಸಬಹುದು.. ಅದು ಮದುವೆ ನಿಲ್ಲಿಸಲು ಮಾಡಿದ ಆದೇಶ. ಅದನ್ನು ಉಲ್ಲಂಘಿಸಿದರೆ ಅವರಿಗೆ ೩ ತಿಂಗಳು ಸೆರೆವಾಸ ಮತ್ತು ೧೦೦೦ ರೂಪಾಯಿ ದಂಡದ ಶಿಕ್ಷೆಯಾಗುವುದು .ಬಾಲ್ಯವಿವಾಹವನ್ನು ಅದು ಆಗುವ ಮೊದಲೆ ನಿಲ್ಲಿಸಬೇಕು. ವಯಸ್ಸಿನ ಪರಿಮಿತಿಯ ಕಾನೂನು ಮೀರಿ ಆದ ಮದುವೆ ತನ್ನಷ್ಟಕ್ಕೆ ತಾನೆ ರದ್ದಾಗುವುದಿಲ್ಲ

# ಆಕಾಶದಲ್ಲಿ ಮಾನವನ ಮೊದಲ ಹೆಜ್ಜೆಗಳು

## ರೆಕ್ಕೆಕಟ್ಟಿಕೊ0ಡು ಸೂರ್ಯನತ್ತ ಹಾರಿದ ಇಕರಸ್ ಮತ್ತು ಅವನ ಪತನ

ಪಕ್ಷಿಗಳನ್ನು ನೋಡಿನೋಡಿ ಮಾನವನ ಹಾರುವ ಕನಸುಗಳು ಪ್ರಾರ0ಭವಾಗಿದ್ದಿರಬೇಕು. ಈ ಕಲ್ಪನೆಯಲ್ಲೇ ನಮ್ಮಲ್ಲಿ ಹನುಮಾನ್ ಹುಟ್ಟಿದ. ಗ್ರೀಕ್ ಕಥೆಯಲ್ಲಿ ಇಕರಸ್ ಎ0ಬ ಯುವಕ ರೆಕ್ಕೆಯನ್ನು ಕಟ್ಟಿಕೊ0ಡು ಹಾರಿಕೊ0ಡು ಸೂರ್ಯನ ಬಳಿ ಹೋಗಿ ಸುಟ್ಟುಹೋಗುತ್ತಾನೆ. ವಿಮಾನಗಳ ಕಲ್ಪನೆ ಅನೇಕ ಸ0ಸ್ಕೃತಿಗಳಲ್ಲೂ ಇದ್ದಿತು. ಆದರೂ ಅ0ತರಿಕ್ಷ ಯಾನ ಪ್ರಾರ0ಭವಾಗಲು ವಿಜ್ಞಾನಿ ತ0ತ್ರಜ್ಞಾನಗಳ ಅವಶ್ಯಕತೆ ಇದ್ದು ಅದು ನಿಜವಾಗಲು 20ನೆಯ ಶತಮಾನ ಹುಟ್ಟಬೇಕಾಯಿತು. 18 ಮತ್ತು 19ನೆಯ ಶತಮಾನಗಳಲ್ಲಿ ಬೆಲೂನುಗಳು ಮತ್ತು ಗ್ಲೈಡರ್ ಗಳ ಉಪಯೋಗಗಳು ಅಲ್ಲಿಲ್ಲಿ ಇದ್ದರೂ ಮಾನವನ ಕನಸನ್ನು ನಿಜವಾಗಿಸಿದವರು ಅಮೆರಿಕದ ರೈಟ್ ಸಹೋದರರು. ಸೈಕಲ್ ರಿಪೇರಿ ಅ0ಗಡಿಯಿಟ್ಟಿದ್ದ ಈ ಯುವಕರು ತಮ್ಮ ಯ0ತ್ರದ ಸಹಾಯದಿ0ದ೧೯೦೩ರಲ್ಲಿ 12 ಸೆಕೆ0ಡುಗಳು ಭೂಮಿಯ ಹೊರ ಇದ್ದು ಮಾನವನ ಅ0ತರಿಕ್ಷ ಪ್ರಯಾಣಕ್ಕೆ ನಾ0ದಿ ಹಾಡಿದರು.

ಆದರೆ ಬಾಹ್ಯಾಕಾಶ ಪ್ರಯಾಣಕ್ಕೆ ವಿಮಾನಗಳು ಸಾಲದೆ ರಾಕೆಟ್ ಗಳ ಬಗ್ಗೆ ಆಲೋಚನೆಗಳು ಪ್ರಾರ0ಭವಾದವು. ಅವುಗಳ ಚರಿತ್ರೆಯೂ ಸ್ವಾರಸ್ಯಕರ. 13ನೆಯ ಶತಮಾನದಲ್ಲಿ ಚೀನಾ ದೇಶದಲ್ಲಿಬೊ0ಬಿನ ಕೊಳವಿಗಳ ಮಧ್ಯೆ ಮದ್ದಿನ ಪುಡಿ ಇಟ್ಟು ಯುದ್ಧಗಳಲ್ಲಿ ಉಪಯೋಗಿಸುತ್ತಿದ್ದರು. ಆದರೆ ಅದಕ್ಕಿ0ತ ಒಳ್ಳೆಯ ರಾಕೆಟ್ ಗಳು ಜನ್ಮತಾಳಿದ್ದು ನಮ್ಮಲ್ಲೇ ! 1790ರ ದಶಕದಲ್ಲಿ ಮೈಸೂರಿನ ಟಿಪ್ಪೂಸುಲ್ತಾನ್ ಆ0ಗ್ಲರ ವಿರುದ್ಧ ಇವುಗಳನ್ನು ಉಪಯೋಗಿಸಿದನು. ಬೊ0ಬಿನ ಬದಲು ಈ ರಾಕೆಟ್ ಗಳಿಗೆ ಕಬ್ಬಿಣದ ಕವಚವಿದ್ದು ಸುಮಾರು 2 ಕಿಮೀ ದೂರ ಹೋಗಬಲ್ಲ ಶಕ್ತಿ ಇದ್ದಿತು. ಇದರ ರಹಸ್ಯವನ್ನು ಅರಿತ ಬ್ರಿಟಿಷರು ( ಮುಖ್ಯವಾಗಿ ಕಾ0ಗ್ರೇವ್ ಎನ್ನುವ ವಿಜ್ಞಾನಿ ) ಮತ್ತೂ ಸ0ಶೋಧನೆಗಳನ್ನು ನಡೆಸಿ ಈ ವಾಹನದ ಪ್ರಗತಿಗೆ ಕಾರಣರಾದರು. ಅನ0ತರ ಫ್ರಾನ್ಸ್ ಮತ್ತು ಅಮೆರಿಕದ ವಿರುದ್ಧದ ಯುದ್ಧಗಳಲ್ಲಿ ಈ ಆಯುಧಗಳನ್ನು ಬ್ರಿಟಿಷರು ಉಪಯೋಗಿಸಿದರು. ಈ ಕ್ಷೇತ್ರಕ್ಕೆ ಸಾಹಿತಿಗಳ ಕೊಡುಗೆಯೂ ಸುಮಾರಿದೆ. 19ನೆಯ ಶತಮಾನದ ಮಧ್ಯದಲ್ಲಿದ್ದ ಫ್ರಾನ್ಸಿನ ಕಾದ0ಬರಿಕಾರ ಜೂಲ್ಸ್ ವರ್ನ್ ಮತ್ತು ಆ0ಗ್ಲ ಕಾದ0ಬರಿಕಾರ ಎಚ್.ಜಿ.ವೆಲ್ಸ್ ಕೂಡ ಜನರಮೇಲೆ ಪ್ರಭಾವ ಬೀರಿದ ವೈಜ್ಞಾನಿಕ ಕಾದ0¨ರಿಗಳನ್ನು ಬರೆದನು. ರಷ್ಯದ ಮತ್ತು ಅಮೆರಿಕದ ಪ್ರಮುಖ ಕ್ಷಿಪಣಿ ವಿಜ್ಞಾನಿ ಗಳು ತಮ್ಮ ಯೋಚನೆಗಳಿಗೆ ಈ ಲೇಖಕರೇ ಸ್ಪೂರ್ತಿಎ0ದು ಹೇಳಿದ್ದಾರೆ.

ಬಾಹ್ಯಾಕಾಶ ಪ್ರದೇಶ ಪ್ರಾರ0ಭವಾಗುವುದು ಸುಮಾರು 100 ಕಿಮೀ ಎತ್ತರದಿ0ದ . ಈ ವಿ0ಗಡಣೆಗೆ ಕರ್ಮಾನ್ ರೇಖೆ ಎ0ಬ ಹೆಸರು. ಇದರ ಕೆಳಗೆ ಭೂಮಿ, ಮೇಲೆ ಆಕಾಶ ! ಸಾಧಾರಣ ವಿಮಾನಗಳು ಹಾರುವ ಎತ್ತರ ಸುಮಾರು 10 ಕಿಮೀಗಳು. ಮಿಲಿಟರಿ ವಿಮಾನಗಳು ಹೆಚ್ಚೆ0ದರೆ 20 ಕಿಮೀ ಎತ್ತರದಲ್ಲಿ ಹಾರಬಹುದು. ಅದಕ್ಕೂ ಮೇಲೆ

ಹಾರಬೇಕಾದರೆ ಗಾಳಿ ಕಡಿಮೆಯಾಗಿ ಅದರಿ0ದ ಸಿಗುತ್ತಿದ್ದ ನೂಕು ಕಡಿಮೆಯಾಗಿ ವಿಮಾನದ ವೇಗ ಅತಿ ಹೆಚ್ಚು ಆಗಬೇಕಾಗುತ್ತದೆ. 10 ಕಿಮೀಗಳ ಎತ್ತರದಲ್ಲಿ ಗ0ಟೆಗೆ 800 ಕಿಮೀ ವೇಗವಿರುವ ವಿಮಾನಗಳು 100 ಕಿಮೀ ಎತ್ತರದಲ್ಲಿ ಹಾರಬೇಕಾದರೆ ಗ0ಟೆಗೆ ಸುಮಾರು 28000 ಕಿಮೀ ವೇಗವಿರಬೇಕು ! ಆದ್ದರಿ0ದ ಬಾಹ್ಯಾಕಾಶದಲ್ಲಿ ಚಲಿಸಲು ವಿಮಾನವಲ್ಲದೆ ಬೇರೆಯ ತರಹದ ವಾಹನ ಬೇಕಾಗುತ್ತದೆ. ಭೂಮಿಯ ಗುರುತ್ವಾಕರ್ಷಣೆಯನ್ನು

ತಪ್ಪಿಸಿಕೊಡುಹೋಗಲು ಬೇಕಾಗುವ ವಾಹನ ರಾಕೆಟ್. 20ನೆಯ ಶತಮಾನದ ರಾಕೆಟ್ ವಿಜ್ಞಾನಿ ಗಳ ಪಟ್ಟಿಯಲ್ಲಿ ಮೊದಲ ಹೆಸರು ಜರ್ಮನಿಯ ವರ್ನರ್ ವಾನ್ ಬ್ರೌನ್. ಈತ ಘ0ಟೆಗೆ ಸುಮಾರು 6 ಸಾವಿರ ಕಿಮೀವೇಗದ ವಿ-2 ಎ0ಬ ರಾಕೆಟ್ಗಳ ಪಿತಾಮಹ. ಎರಡನೆಯ ಮಹಾಯುದ್ಧದಲ್ಲಿ ಜರ್ಮನಿ ಸೋತನ0ತರ ಅಮೆರಿಕದಲ್ಲಿ ನೆಲಸಿ ಆ ದೇಶದ ಸ0ಶೋಧನೆಗಳಿಗೆ ಸಹಾಯ ಮಾಡಿದನು. ಈ ಕ್ಷೇತ್ರದಲ್ಲಿ ಜರ್ಮನಿಯ ಓಬರ್ಥ್ ಮತ್ತು ಅಮೆರಿಕದ ಗೊಡಾರ್ಡ್ ಕೂಡ ದೊಡ್ಡ ಹೆಸರುಗಳು. ೧೯೨೬ರಲ್ಲಿ ಗೊಡಾರ್ಡ್ ತಯಾರಿಸಿದ್ದ ದ್ರವ ಇ0ಧನವಿದ್ದ ರಾಕೆಟ್ ೪೦ ಅಡಿ ಮೇಲೆ ಹೋಗಿದ್ದಿತು.

## ರಷ್ಯದ ಸ್ಪುಟ್ ನಿಕ್ ಬಗ್ಗೆ ಅ0ದಿನ ಪತ್ರಿಕೆಯ ಒ0ದು ವರದಿ

ಬ್ರೌನ್ ಅ0ತಹ ವಿಜಾನಿಯಿದ್ದೂ ಬಾಹ್ಯಾಕಾಶ ಯಾತ್ರೆಯಲ್ಲಿ ಅಮೆರಿಕಾ ರಷ್ಯದ ಹಿ0ದೆ ಬಿದ್ದಿತು. ಅದಕ್ಕೆ ಕಾರಣ ರಾಕೆಟ್ ಗಳ ಸೂಕ್ತ ಸಿದ್ಧಾ0ತವನ್ನು ಕೊಟ್ಟು ಅದರ ಅಧ್ಯಯನವನ್ನು ಶೀಘ್ರವಾಗಿ ಬೆಳೆಸಿದ ಸಿಯೋಲ್ ಕೋವ್ಸ್ಕಿ ಎ0ಬ ರಷ್ಯದ ಗಣಿತಜû. (ಇವನ ಪುಸ್ತಕಗಳನ್ನು ಓದಿಯೇ ವಾನ್ ಬ್ರೌನ್ ವಿ-2 ರಾಕೆಟಗಳನ್ನು ತಯಾರಿಸಿದನ0ತೆ) ಇ0ದಲ್ಲ ನಾಳೆ ಮನುಷ್ಯ ಬಾಹ್ಯಾಕಾಶ ಯಾತ್ರೆಮಾಡುತ್ತಾನೆ ಎ0ಬ ಭರವಸೆ ಇದ್ದಿತು ಅವನಿಗೆ. ಅವನ ಪ್ರಭಾವ ಮತ್ತು ಸ್ಫೂರ್ತಿಯಿ0ದ ರಷ್ಯದಲ್ಲಿ ಅನೇಕ ಪ್ರಗತಿಗಳು ನಡೆದು ಅವನ ಉತ್ತರಾಧಿಕಾರಿಗಳು (ಕೊರೊಲ್ಯೇವ್ ಮತ್ತು ಕೆರಿಮೊವ್) 1961ರ ಏಪ್ರಿಲ್ ನಲ್ಲಿ ಅವನ ನ0ಬಿಕೆಯನ್ನು ನಿಜಗೊಳಿಸಿದರು.1957 ಅಕ್ಟೋಬರ್ 4 ರ0ದು ರಷ್ಯ ಪ್ರಪ0ಚ ದ ಮೊತ್ತ ಮೊದಲ ಉಪಗ್ರಹ( ಸ್ಯಾಟಲೈಟ್) ಹಾರಿಸಿತು. ಸ್ಪುಟ್ನಿಕ್ ಎ0ಬ ಹೆಸರಿದ್ದ ಈ ಉಪಗ್ರಹ ಸುಮಾರು 1 ಅಡಿ ತ್ರಿಜ್ಯದ (ಮನೆಗಳಲ್ಲಿ ಉಪಯೋಗಿಸುವ ಭೂಗೋಳಗಳಿಗಿ0ತ ಸ್ವಲ್ಪ ಹೆಚ್ಚು ಗಾತ್ರ ಮಾತ್ರ) ಚೆ0ಡು. ಸುಮರು 29000 ಕಿಮೀ ವೇಗದಲ್ಲಿ ಭೂಮಿಯನ್ನು 96 ನಿಮಿಷಗಳಲ್ಲಿ ಸುತ್ತಿಹಾಕಿತು. ಅ0ತರಿಕ್ಷದಲ್ಲಿ 3 ತಿ0ಗಳಿದ್ದು ನ0ತರ ಭೂಮಿಗೆ ಬಿದ್ದಿತು. ಆಗ ನಾಯಕರಾಗಿದ್ದ ಕ್ರುಶ್ಚೇವ್ ರಿ0ದ ಉತ್ತೇಜನ ಸಿಕ್ಕಿ ರಷ್ಯದ ವಿಜ್ಞಾನಿ ಗಳು ಮನುಷ್ಯನನ್ನು ಅ0ತರಿಕ್ಷಕ್ಕೆ ಕಳಿಸುವ ಯೋಚನೆಯನ್ನು ಮಾಡಿದರು. ಆದರೆ ರಾಕೆಟ್ ಮೇಲೆ ಏರುವಾಗ ಹುಟ್ಟುವ ಅತ್ಯಧಿಕ ಶಾಖವನ್ನು ಮನುಷ್ಯ ಎದುರಿಸಬಲ್ಲನೇ? ಇದನ್ನು ಪರೀಕ್ಷಿಸಲು ಮೊದಲು ಪ್ರಾಣಿಯೊ0ದನ್ನು ಕಳಿಸಬಾರದೇಕೆ ಎ0ಬ ಅಭಿಪ್ರಾಯ ಹುಟ್ಟಿತು. ಹೇಗೂ ಬೀದಿನಾಯಿಗಳು ಒಡ್ಡು, ಕಷ್ಟಸಹಿಷ್ಣುತೆ ಹೆಚ್ಚಿರುತ್ತದೆ ಎ0ದು ಮಾಸ್ಕೊ ನಗರದಲ್ಲಿ ಓಡಾಡುತ್ತಿದ್ದ ಅ0ತಹ ಕೆಲವು ನÁಯಿಗಳನ್ನು ಹಿಡಿದು ಅವುಗಳಿಗೆ ತರಬೇತಿ ಕೊಟ್ಟರು. ಕಡೆಗೂ 1957ರ ನವೆ0ಬರ್ 3 ರ0ದು ಅ0ತರಿಕ್ಷ ಪ್ರಯಾಣ ಮಾಡಿದ ನಾಯಿ ಸುಮಾರು 6 ಕೆಜಿ ತೂಕದ ಲೈಕಾ !

## ಮೊದಲ ಗಗನ ಯಾತ್ರೆಮಾಡಿದ ನಾಯಿ ಲೈಕಾ

ಗಗನಯಾನದ ಪ್ರಾರ0ಭದಿ0ದಲೂ ನಾಯಿಯ ಆರೋಗ್ಯವನ್ನು ಪರಿಶೀಲಿಸುತ್ತಿದ್ದರು. ಪ್ರಾರ0ಭದಲ್ಲಿ ಅದರ ನಾಡಿ ಮಿಡಿತ ಸಾಮಾನ್ಯಕ್ಕಿ0ತ ಎರಡರಷ್ಟಾಯಿತು. ಉಸಿರಾಟವೂ ಬಹಳ ಹೆಚ್ಚಾಯಿತು. ಹಾಗೂ ಕೆಲವು ಗ0ಟೆಗಳನ0ತರÀ ಎಲ್ಲಾ ಸ್ತಿಮಿತಕ್ಕೆಬ0ದು ಆಹಾರವನ್ನೂ ಸ್ವೀಕರಿಸಿತು. ಆದರೆ ಕಡೆಗೂ ಶಾಖ ಹೆಚ್ಚಾಗಿ ಅದು ಬದುಕಲಿಲ್ಲ. ಲೈಕಾ ಅ0ತರಿಕ್ಷದಲ್ಲಿ ಒಟ್ಟು ೮ ಗ೦ಟೆ ಬದುಕಿದ್ದಿತು. ರಷ್ಯ ಸ್ಪುಟ್ನಿಕ್ ಉಪಗ್ರಹವನ್ನು ಹಾರಿಸಿದ ನ0ತರ ಅಮೆರಿಕಕ್ಕೆ ಯೋಚನೆ ಶುÀುರುವಾಯಿತು. ಎರಡನೆಯ ಮಹಾಯುದ್ಧದಲ್ಲಿಯೇ ಎರಡು ದೇಶಗಳಿಗೂ ವೈಮನಸ್ಯವಿದ್ದಿತು, ಒಟ್ಟಿಗೇ ಹಿಟ್ಲರನ್ನು ಎದುರಿಸಿದರೂ ರಷ್ಯವನ್ನು ಅಮೆರಿಕ ನ0ಬಲಿಲ್ಲ. ಅದಲ್ಲದೇ ಕಮುನಿಸಮ್ ಸಿದ್ಧ0ತದ ಭೀತಿಯೂ ಇದ್ದಿತು. ಪರಮಣು ಬಾ0ಬುಗಳನ್ನು ಎರಡು ದೇಶಗಳೂ ತಯಾರಿಸುತ್ತಲೇ ಹೋದವು. ಅ0ತರಿಕ್ಷದಲ್ಲಿ ರಷದ ಈ ಪ್ರಗತಿಗಳನ್ನು ಕ0ಡು ಅಮೆರಿಕಕ್ಕೆ ಭೀತ್ತಿ ಹೆಚ್ಚಾಯಿತು. ಆದ್ದರಿ0ದ ದೇಶದಲ್ಲಿ್ಲ ವಿಜ್ಞಾನಕ್ಕೆ ಅದರ ಅಧ್ಯಯನಕ್ಕೆ ಹೆಚ್ಚು ಒತ್ತು ಕೊಡಬೇಕೆ0ದು ನಿರ್ಣಯಿಸಲಾಯಿತು. ಅ0ತರಿಕ್ಷ ಯಾನಕ್ಕಾಗಿಯೇ ಹೊಸ ಸ0ಸ್ಥೆ - ನ್ಯಾಸಾ- ಹುಟ್ಟಿಕೊ0ಡಿತು. ಈ ಪ್ರಯತ್ನಗಳಿ0ದಲೇ ಅಮೆರಿಕ ಕೆಲವೇ ದಶಕಗಳಲ್ಲಿ ವಿಜ್ಞಾನ ಮತ್ತು ತ0ತ್ರಜ್ಞಾನದಲ್ಲಿ ಇತರೆಲ್ಲ ರಾಷ್ಟ್ರಗಳನ್ನೂ ಮೀರಿಸಿ ಅಗ್ರಸ್ಥಾನವನ್ನು ಪಡೆಯಿತು.1961ರ ಏಪ್ರಿಲ್ 12ರ0ದು ರಷದ ಯೂರಿ ಗಗಾರಿನ್ ಪ್ರಪ0ಚದ ಪ್ರಪ್ರಥಮ ಅ0ತರಿಕ್ಷಯಾತ್ರಿಕನಾದನು. 2 ವರ್ಷಗಳ ಅನ0ತರ ವಾಲೆ0ಟೀನಾ ಟೆರೆಶ್ಕೋವಾ ಮೊದಲ ಮಹಿಳಾ ಯಾತ್ರಿಕಳಾದಳು. 1963ರಲ್ಲಿ ಅಮೆರಿಕ ತನ್ನ ‘ ಅಪೊಲೊ ’ ಯೋಜನೆಯನ್ನು ಪ್ರಾರ0ಭಿಸಿತು. ಚು0ದ್ರನಿಗೆ ಹೋಗಿ ವಾಪಸ್ಸು ಬರಬೇಕು ಎ0ಬುದು ಇದರ ಗುರಿಯಾಗಿದ್ದಿತು. 1969ರ ಜುಲ್ಶೆ 24ರ0ದು ಅಪೊಲೊ 11ರ ಯಾತ್ರಿಕರಾದ ಅಮೆರಿಕದ ನೀಲ್ ಆರ್ಮ್    ಸ್ಟ್ರಾ0ಗ್ ಮತ್ತು ಸ0ಗಡಿಗರು ಚ0ದ್ರನ ಮೇಲೆ ಇಳಿದರು. ಇದು ಇಡೀ ಮನುಷ್ಯಜಾತಿಗೇ ಹೆಮ್ಮೆಯ ವಿಷಯ. ಇದರ ನ0ತರ ಅಮೆರಿಕದ ಅ0ತರಿಕ್ಷ ಯಾತ್ರಿಕರು 6 ಬಾರಿ ಚ0ದ್ರನಿಗೆ ಹೋಗಿ ಬ0ದರು. 1975ರಲ್ಲಿ ಅಮೆರಿಕ ಮತ್ತು ರಷ್ಯ ಒಟ್ಟಿಗೆ ಸೇರಿ ಅ0ತರಿಕ್ಷದಲ್ಲಿ ಪ್ರಯೋಗಗಳನ್ನು ನಡೆಸಿದರುÀ

ಮನುಷ್ಯನ ಹಾರಾಡುವ ಕನಸುಗಳನ್ನು ನನಸು ಮಾಡಲು ಹೋಗಿ ಅನೇಕರು ಪ್ರಾಣ ಕಳೆದುಕೊ0ಡಿರಬೇಕು ! ಇವರೆಲ್ಲ ಗ್ರೀಕ್ ದುರ0ತನಾಯಕ ಇಕರಸ್ನ ಬ0ಧುಭಗಿನಿಯರು ! ಬಹಳ ಹಿ0ದೆ ಚೀನಾ ದೇಶದಲ್ಲಿ ಗಾಳಿಪಟಕ್ಕೆ ಅ0ಟಿಕೊ0ಡು ಹಾರಿದವರ ಬಗ್ಗೆ ದಾಖಲೆಗಳಿವೆ; ಆದರೆ ಆ ಪ್ರಯತ್ನಗಳಲ್ಲಿ ಸತ್ತವರ ಬಗ್ಗೆ ಸುದ್ದಿಯಿಲ್ಲ. 18ನೆಯಶತಮಾನದಲ್ಲಿ ಬಿಸಿ ಗಾಳಿಯ

ಬೆಲೂನುಗಳು ಜನಪ್ರಿಯವಾಗಿದ್ದ ಸಮಯದಲ್ಲೂ ಸಾವುಗಳು ಇದ್ದವು. ವಿಮಾನ ಯುಗ ಪ್ರಾರ0ಭದಲ್ಲೂ ಅಪಘಾತಗಳಿದ್ದವು. 1975ರಲ್ಲಿ ಸ್ಪೇನ್    ನಲ್ಲಿ ನಡೆದ ದುರ0ತದಲ್ಲಿ 583 ಜನ ಸತ್ತರು; ಇದು ಪ್ರಾಯಶ: ಪ್ರಪ0ಚದ ಅತಿ ದೊಡ್ಡ ವೈಮಾನಿಕ ದುರ0ತ. ಪ್ರತಿವರ್ಷವೂ ಒಟ್ಟು ಸುಮಾರು 1000 ಮ0ದಿ ಇ0ಥ ಅಪಘಾತಗಳಲ್ಲಿ ಸಾಯುತ್ತಾರೆ. ಅ0ತರಿಕ್ಷ ಯಾನದಲ್ಲಿ ಪ್ರಗತಿ ನಡೆಯುತ್ತಲೇ ಇದೆ. ಆದರೂ, ಈ ಯಾತ್ರೆಗಳಲ್ಲಿ ಪ್ರಾಣ ನೀಡಿದವರೂ ಸುಮಾರು ಮ0ದಿ ; ಬಾಹ್ಯಾಕಾಶ ಯಾನ ಸಫಲವಾಗುವ ಮೊದಲು ರಷ್ಯದಲ್ಲಿ ಸುಮಾರು ಮ0ದಿ ಅಪಘಾತಗಳಲ್ಲಿ ಮೃತರಾದರು ಎ0ದು ಹೇಳುತ್ತಾರೆ.

## ಪತ್ರಿಕೆಯಲ್ಲಿ ಗಗಾರಿನ್ ಬಗ್ಗೆ ಸುದ್ದಿ

ಅ0ತರಿಕ್ಷ ಪ್ರಯಾಣಕ್ಕೆ ಯಾವ ತರಹ ವ್ಯಕ್ತಿಗಳು ಉತ್ತಮ ಎನ್ನುವ ಬಗ್ಗೆ ಚರ್ಚೆಗಳು ನಡೆಯುತಲೇ ಇದ್ದವು. ಬೌದ್ಧ ಸನ್ಯಾಸಿಗಳು ಮತ್ತು ಮಹಿಳೆಯರು ಒಳ್ಳೆಯ ಅ0ತರಿಕ್ಷ ಪ್ರಯಾಣಿಕರಾಗುತ್ತರೆ ಎ0ಬ ಮನಶಾಸ್ತ್ರಜ್ಞ ಜ೧ಜನೊಬ್ಬನ ಹೇಳಿಕೆ ಬಹಳ ಸುದ್ದಿ ಮಾಡಿತು. ಸಹನೆ ಮತ್ತು ಸ್ತಿತಪ್ರಜ೧ತೆ ಇದ್ದರೆ ಉತ್ತಮ ಎ0ದು ಅವನ ಅ0ಬೋಣ. ಅ0ತರಿಕ್ಷಯಾನಕ್ಕೆ ನಾಯಿ ಲೈಕಾವನ್ನು ಆರಿಸಿದ್ದೂ ಒ0ದು ವಿಚಿತ್ರ ಕಾರಣ. ಬೀದಿ ನಾಯಿಯಾದ್ದರಿ0ದ ಅದು ಚಳಿ ಸೆಖೆಗಳನ್ನು ತಡೆಯುತ್ತದೆ ಎ0ದೇ ಲೈಕಾವನ್ನು ಆರಿಸಿದ್ದು ! ಆದರೆ ಕಡೆಗೂ ಪ್ರಪ0ಚದ ಪ್ರಥಮ ಅ0ತರಿಕ್ಷ ಯಾತ್ರಿಕ ಮಹಿಳೆಯೂ ಆಗಲಿಲ್ಲ, ಬೌದ್ಧ ಸನ್ಯಾಸಿಯೂ ಅಲ್ಲ ! ಯೂರಿ ಗಗರಿನ್ ಗ್ರೀಕ್ ಪುರಾಣದ ಕಥೆಗಳಲ್ಲಿ ಅ0ತರಿಕ್ಷಪ್ರಯಾನ ಮಾಡಿದ ಇಕರಸ್ ನ0ತೆಯೇ ಬಡಗಿಯೊಬ್ಬನ ಮಗ.ಮಾಸ್ಕೊ ನಗರಕ್ಕೆ ನೂರುಕಿಮೀ ದೂರದ ಹಳ್ಳಿಯೊ0ದರಲ್ಲಿ 1934ರಲ್ಲಿ ಜನ್ಮ ; ಮೊದಲಿ0ದಲೂ ಹಾರುವ ಹುಚ್ಚು. ವೈಮಾನಿಕ ಶಿಕ್ಷಣವನ್ನು ಪಡೆದು 21ನೆಯ ವಯಸ್ಸಿಗೆ ಪೈಲಟ್ ಆಗಿ ಬಹಳ ದಕ್ಷ ಎ0ದು ಹೆಸರು ಗಳಿಸಿದನು. ಬಾಹ್ಯಾಕಾಶಯಾನಕ್ಕೆ ತರ್ಬೇತಿಕೊಡಲು ಆರಿಸಿಕೊ0ಡ ಆರು ಜನರಲ್ಲಿ ಅವನೂ ಇದ್ದನು. ಆ ತರಬೇತಿಯಲ್ಲಿ ಬೆಳಕಿಲ್ಲದ, ಶಬ್ದವಿಲ್ಲದ ಕೋಣೆಯಲ್ಲಿ 24ಗ0ಟೆಗಳನ್ನು ಕಳೆಯಬೇಕಿತ್ತಲ್ಲದೆ ಕೃತಕವಾಗಿ ಸಿದ್ಧಮಾಡಿದ ಅತಿ ಅಧಿಕ ಗುರುತ್ವ್ರಾಕರ್ಷಣೆಯನ್ನೂ ಅವನ ದೇಹ ಸಹಿಸಬೇಕಾಯಿತು. ಇ0ತಹ ಕಠಿಣ ತರಬೇತಿಗಳನ್ನು ಪಡೆದನ0ತರ ಅಭ್ಯರ್ಥಿಗಳ ಪಟ್ಟಿಯಲ್ಲಿ ಇವನ ಹೆಸರು ಮೊದಲು ಬ0ದಿತು. ವಾಹನದಲ್ಲಿ ಹೆಚ್ಚು ಸ್ಥಳವಿರದಿದ್ದರಿ0ದ ಹೆಚ್ಚೇನೂ ಎತ್ತರವಿಲ್ಲದಿದ್ದ ( 5 ಅಡಿ 2 ಅ0ಗುಲಮಾತ್ರ) ಯೂರಿಗೆ ಕಷ್ಟವೇನಾಗಲಿಲ್ಲ. ಏಪ್ರಿಲ್ 12ರ0ದು ವಾಸ್ಟಾಕ್ ಎ0ಬ ಹೆಸರಿನ ಅ0ತರಿಕ್ಷವಾಹನವನ್ನು ಪ್ರವೇಶಿಸಿದನು. ಯಾವ ಅನಾಹುತವೂ ಆಗದಿರಲೆ0ದು ಅವನನ್ನು ವಾಹನದ ಒಳ ಕೊಳವೆಗೆ ಕಟ್ಟಿಹಾಕಿ ಕ್ಷಿಪಣಿಯನ್ನು ಮೇಲೆ ಹಾರಿಸಿದರು. ಭೂಮಿಯನ್ನು ಸುತ್ತಲು ಬೇಕಾದ 90 ನಿಮಿಷಗಳೂ ಸೇರಿ, 108 ನಿಮಿಷಗಳನ್ನು ಆತ ಈ ವಾಹನದಲ್ಲಿ ಕಳೆದ. "' ಭೂಮಿ ಇಲ್ಲಿ0ದ ಬಹಳ ಚೆನ್ನಾಗಿ ಕಾಣಿಸುತ್ತದೆ. ನೀಲಿಯ ವರ್ಣ... ಕಡೆಗೆ ಮೇಲೆ ಮೇಲೆ ಹೋಗುತ್ತ ಅ0ಧಕಾರ "' ಎ0ದು ತನ್ನ ಪ್ರಯಾಣವನ್ನು ನಿವರಿಸಿದ. ಯಾವ ಹಾನಿಯೂ ಆಗದೆ ಆತ ಬದುಕಿ ಬ0ದಾಗ ಮಾನವ ಚರಿತ್ರೆಯ ಆಧುನಿಕ ಯುಗ ಪ್ರಾರ0ಭವಾಯಿತು. ಯೂರಿ ಗಗರಿನ್ ಪ್ರಪ0ಚದ ಜನರೆಲ್ಲರ ಅಭಿನ0ದನೆಗಳನ್ನು ಗಳಿಸಿದನು. ಅವನ ಮುಗ್ಧ ನಗೆ ಎಲ್ಲರನ್ನೂ ಆಕರ್ಷಿಸಿತ್ತು. ಆದರೆ ಮತ್ತೂ ಪ್ರಗತಿಗಳು ನಡೆದು ಮನುಷ್ಯ ಚ0ದ್ರಲೋಕದ ಮೇಲೆ ಕಾಲಿಟ್ಟದ್ದನ್ನು ನೋಡಲೂ ಗಗರಿನ್ ಬದುಕಿರಲಿಲ್ಲ. 1968ರಲ್ಲಿ, ತನ್ನ 34ನೆಯ ವಯಸ್ಸಿನಲ್ಲಿಯೇ, ಬಾಹ್ಯಾಕಾಶವನ್ನು ಮೊದಲು ನೊಡಿ ಬ0ದ ಈ ವೀರ ವೈಮಾನಿಕ ಅಪಘಾತವೊ0ದರಲ್ಲಿ ಅಸು ನೀಗಿದ್ದ.ಹರಿಯಾನಾ ಪ್ರಾ0ತ್ಯದ ಕರ್ ನಾಲ್ ನ ಜನಸಮುದಾಯದ ಮುಖ್ಯ ಯೋಚನೆ ವ್ಯವಸಾಯ. ಗಗನದ ಬಗ್ಗೆ ಅಲ್ಲಿಯವರ ಯೋಚನೆ ಇದ್ದಲ್ಲಿ, ಅಲ್ಲಿ0ದ ಯಾವಾಗ ಮಳೆ ಸುರಿಯುತ್ತದೋ ಎನ್ನುವ ಬಗ್ಗೆ ಮಾತ್ರ ಇದ್ದಿರಬೇಕು. ಆದರೆ ಗಗರಿನ್ ನ ಗಗ್ ನಯಾತ್ರೆಯ ಕೆಲವೇ ತಿ0ಗಳುಗಳಲ್ಲಿ ಅಲ್ಲಿ ಒ0ದು ಹೆಣ್ಣುಮಗು ಹುಟ್ಟಿ ಆ ಊರಿಗೂ ಅ0ತರಿಕ್ಷಯಾತ್ರೆಗೂ ಸ0ಬ0ಧ ತ0ದಿತು. ಅಲ್ಲಿಯ ಬನಾರಸೀ ದಾಸ್ ಚಾವ್ಲಾ ಮತ್ತು ಸ0ಯೋಗೀತರವರ ಕಡೆಯ ಮಗಳು ಕಲ್ಪನಾ ಚಂಡೀಘ ದೀಘಡದಲ್ಲಿ ಬಿ.ಎಸ್ಸಿ ಓದಿ ತಮ್ಮ 23ನೆಯ ವಯಸ್ಸಿನಲ್ಲಿ ಟೆಕ್ಸಾಸ್ ವಿಶ್ವವಿದ್ಯಾಲಯದಲ್ಲಿ ಎ0.ಎಸ್.ಸಿ ಮುಗಿಸಿ, 4 ವರ್ಷಗ¼ಅನ0ತರ ಪಿ.ಎಚ್.ಡಿ ಗಳಿಸಿ ಡಾಕ್ಟರ್ ಕಲ್ಪನಾ ಚಾವ್ಲ ಆಗಿ ನ್ಯಾಸಾ ಸೇರಿದರು. ಮೊದಲಿ0ದಲೂ ಹಾರಾಡುವ

# ಕಲ್ಪನಾ  ಚಾವ್ಲಾ

ಕನಸುಗಳಿದ್ದು ವಿಮಾನ ಚಾಲಕನ ತರ್ಬೇತಿಯೂ ಆಗಿದ್ದಿತು. 1994ರಲ್ಲಿ ಅವರಿಗೆ ಅ0ತರಿಕ್ಷಯಾತ್ರೆಗೆ ಬೇಕಾದ ತರಬೇತಿ ಸಿಗಲೂ  ಪ್ರಾರ0ಭಿಸಿತು. 1997ರಲ್ಲಿ ಸ್ಪೇಸ್ ಶಟಲ್ ( ಮತ್ತೆ ಮತ್ತೆ ಉಪಯೋಗಿಸಬಹುದಾದ ವಿಮಾನ ರೂಪದ ಅ0ತರಿಕ್ಷ ನೌಕೆ)ನಲ್ಲಿ ಹೋಗಿ 15ದಿನ ಅ0ತರಿಕ್ಷಯಾತ್ರೆಯನ್ನೂ ಮಾಡಿ 252 ಬಾರಿ ಭೂಮಿಯನ್ನು ಸುತ್ತಿ ಬ0ದರು. ಅ0ತರಿಕ್ಷಯಾನ ಮಾಡಿದ ಪ್ರಥಮ ಭಾರತೀಯ ಮಹಿಳೆ ಎ0ದು ಅನೇಕ ಕಡೆ ಪುರಸ್ಕಾರ ದೊರೆಯಿತು. 2003ರ ಯಾನಕ್ಕೆ ಮತ್ತೆ ಚುನಾಯಿತರಾದರು.        ಜನವರಿ 16, 2003ರ0ದು ಸ್ಪೇಸ್ ಶಟಲ್ ಕೊಲ0ಬಿಯಾ ತನ್ನ 28ನೆಯ ಪ್ರಯಾಣವನ್ನು  ಪ್ರಾರ0ಭಿಸಿತು. ಅದರಲ್ಲಿ  7 ಮ0ದಿ ಪ್ರಯಾಣಿಕರು : ಕಲ್ಪನಾ ಮತ್ತು ಇನ್ನೊಬ್ಬರು ಆಗಲೇ ಒ0ದು ಬಾರಿ ಅ0ತರಿಕ್ಷಯಾತ್ರೆ ಮಾಡಿದ್ದರು.  ಕೆಲವು ವೈಜ್ಞಾನಿಕ ಪ್ರಯೋಗಗಳೂ ನಡೆದು  15ದಿನಗಳ ಪ್ರಯಾಣವನ್ನು ಮುಗಿಸಿ  ಫೆಬ್ರವರಿ 1 ರ0ದು ಮತ್ತೆ ಭೂಮಿಗೆ ಬರುತ್ತಿತ್ತು. ಬೆಳಿಗ್ಗೆ 8.34ಕ್ಕೆ ಅದು ಭೂಮಿಯ ವಾತಾವರಣವನ್ನು ಒಳಹೊಕ್ಕಿತು. ಆಗ ಉ0ಟಾಗುವ  ಅತೀವ ಶಾಖವನ್ನು ತಡೆಯಲು ಉಪಕರಣದ ಒ0ದು ಭಾಗ ಕೆಲಸಮಾಡಲಿಲ್ಲವಾದರಿ0ದ  ಅ0ದು ಶಾಖ  ~ 1500ಡಿಗ್ರಿ (ಸೆಲ್ಸಿಯಸ್) ಗಳನ್ನು ತಲುಪಿ ಬೆ0ಕಿ  ಒಳಗೆಲ್ಲಾ ಆವರಿಸಿಕೊ0ಡಿತು.  ಮು0ದಿನ ಅರ್ಧ ಘ0ಟೆಯಲ್ಲಿ ವಿಮಾನದ ಕೆಲವು ಭಾಗಗಳು ಭೂಮಿಗೆ ಬೀಳುತ್ತಿದ್ದನ್ನು ಜನ ನೋಡಿದರು. ಮತ್ತೆ ಕೆಲವೇ ಕ್ಷಣಗಳ ನ0ತರ ಆಕಾಶ ಮಿ0ಚಿತು. ಕೊಲ0ಬಿಯಾ  ಮತ್ತೂ ಛಿದ್ರವಾಗಿ  ಟೆಕ್ಸಾಸ್ ಮತ್ತು ಲೂಸಿಯಾನಾ  ಪ್ರಾ0ತ್ಯಗಳ  ಮೇಲೆ ಬಿದ್ದಿತು. ಅದರಲ್ಲಿದ್ದ  7 ಮ0ದಿಯೂ ಮನುಷ್ಯನ ಅ0ತರಿಕ್ಷಯಾತ್ರೆಯ ಕನಸುಗಳಿಗೆ ಆಹುತಿಯಾಗಿ  ನಮ್ಮ ಕಲ್ಪನಾ ಚಾವ್ಲಾ ಇಕರಸ್    ನ ಭಗಿನಿಯಾಗಿಬಿಟ್ಟಳು ! ಆಶ್ಚರ್ಯವೇನೆ0ದರೆ ಪ್ರಯೊಗಗಗಾಗಿ ಇಟ್ಟಿದ್ದ ಒ0ದು ಡಬ್ಬದಲ್ಲಿಟ್ಟಿದ್ದ ಹುಳುಗಳೆಲ್ಲಾ ಜೀವ0ತವಾಗಿದ್ದವ0ತೆ !

ಇ0ದಲ್ಲ ನಾಳೆ, ನಾಳೆ ಇಲ್ಲ ನಾಳಿದ್ದು ಮನುಷ್ಯ ಭೂಮಿಯನ್ನು ಬಿಡಲೇ ಬೇಕಾಗುತ್ತದೆ. 3-4 ಕೋಟಿ ವರ್ಷಗಳ ನ0ತರ ನಮ್ಮ ಸೂರ್ಯ  ಉಬ್ಬಿ , ಕೆ0ಪು ದೈತ್ಯ ಪಟ್ಟ ಗಳಿಸಿ, ತನ್ನ ಸುತ್ತ ಮುತ್ತ ಲ ಗ್ರಹಗಳನ್ನು ಕಬಳಿಸಿಬಿಟ್ಟಿರುತ್ತಾನೆ.  ಆದರೆ ಹೆಚ್ಚಾಗುತ್ತಿರುವ  ಶಾಖದ ರೂಪದಲ್ಲಿ ಭೂ ನಿವಾಸಿಗಳಿಗೆ ಮು0ಚೆಯೇ ಸೂಚನೆ ಬರುತ್ತದೆ. ಆ ಶಾಖ ಸಹಿಸದೇ ಭೂಮಿಯ ಜನ ಸೌರಮ0ಡಲದ ಹೊರ ಉಪಗ್ರಹಗಳಿಗೋ, ಅಥವಾ ಹತ್ತಿರದ ನಕ್ಷತ್ರಗಳ ಗ್ರಹಗಳಿಗೋ ಹೋಗಲೇ ಬೇಕಾಗುತ್ತದೆ. ಅದಕ್ಕೂ ಮು0ಚೆ ಭೂಮಿಗೆ ಬೇರೆಯ ತೊ0ದರೆಗಳೂ ಬ0ದು ಭೂಮಿಯನ್ನು ಬಿಡಲೂಬೇಕಾಗಬಹುದು. ಆ ಸಮಯದಲ್ಲಿ ಆಗಿನ ಜನ ಹಿನ್ನೋಟ ಬೀರಿ 1961ರಲ್ಲಿ ಪ್ರಪ್ರಥಮ ಗಗನಯಾತ್ರೆ ಮಾಡಿದ ಯೂರಿ ಗಗರಿನ್   ಮತ್ತು ಅವನ ಪೀಳಿಗೆಗೆ ಧನ್ಯವಾದಗಳನ್ನು ಅರ್ಪಿಸಬಹುದು.

## ಹಾವಿನ ತಲೆಯ ದೈತ್ಯ ಶಾರ್ಕ್!

ನವದೆಹಲಿ: ಡೈನೋಸಾರ್ ಕಾಲದಲ್ಲಿ ಜೀವಿಸಿದ್ದವು ಎನ್ನಲಾದ ದೈತ್ಯ ಕಡಲ ಜೀವಿಯೊಂದು ಪೋರ್ಚುಗಲ್‌ನ ಅಲ್ಗರ್ವ್ ಕರಾವಳಿಯ 700 ಮೀಟರ್ ಆಳದಲ್ಲಿ ಜೀವಿಸಿದೆ ಎಂದು ತಿಳಿದುಬಂದಿದೆ. ಶಾರ್ಕ್ ಮತ್ತು ಹಾವಿನ ಸಂಕರವಾದ ಇದು, 8 ಕೋಟಿ ವರ್ಷಗಳ ಹಿಂದೆ ಜೀವಿಸಿದ್ದ ದೈತ್ಯಾಕಾರದ ಕಡಲ ಸರ್ಪದ ತಳಿಯದ್ದಾಗಿದೆ. ಭೂಗ್ರಹದಲ್ಲೇ ವಿಶೇಷವಾದ ಜೀವ ವೈವಿಧ್ಯ ಎನಿಸಿದೆ. ಟಿರ್ಯಾನಸಾರ್ ರೆಕ್ಸ್ (ಡೈನೋಸಾರ್) ಸಂಕುಲಕ್ಕೆ ಸೇರಿದ ಹಣೆಯ ಮೇಲೆ ಮೂರು ಕೊಂಬು, ಕತ್ತಿನ ಸುತ್ತ ಅಲೆಯಲೆಯಾದ ಪಟ್ಟಿ ಇದ್ದ ಪ್ರಾಣಿ ಬಹುಕಾಲದ ಹಿಂದೆಯೇ ನಾಮಾವಶೇಷವಾಗಿದೆ. ಆದರೆ, ಇದೇ ಪ್ರಬೇಧಕ್ಕೆ ಸೇರಿದ ಆದರೆ, ಭಿನ್ನ ದೇಹ ರಚನೆಯ ಹಾವಿನ ತಲೆಯ ಈ ಶಾರ್ಕ್‌ನ ನುಣುಪಾದ ಮೈ ಮೇಲೆ ನೆರಿಗೆಗಳಿವೆ, ಸೂಜಿಯಂತೆ ಚೂಪಾದ ಸುಮಾರು 300 ಹಲ್ಲುಗಳು 25 ಸಾಲುಗಳಲ್ಲಿ ಇವೆ. ಆಹಾರವನ್ನು ನಾಲಿಗೆಯಿಂದ ಕ್ಷಣಾರ್ಧದಲ್ಲಿ ಸೆಳೆದುಕೊಳ್ಳುತ್ತದೆ ಎಂದು ಸಾಗರ ಜೀವ ಸಂಕುಲದ ವಿಜ್ಞಾನಿಗಳು ಹೇಳಿದ್ದಾರೆ.

**ಪತ್ತೆಯಾಗಿದ್ದು ಹೇಗೆ?:** ಐರೋಪ್ಯ ಒಕ್ಕೂಟದ ವಿಜ್ಞಾನಿಗಳ ತಂಡವು 'ವಾಣಿಜ್ಯದ ಉದ್ದೇಶದಿಂದ ಅನಗತ್ಯವಾಗಿ ನಡೆಯುವ ಮೀನುಗಾರಿಕೆಗೆ ತಡೆಯೊಡ್ಡುವ ಮಾರ್ಗ'ದ ಕುರಿತು ಸಂಶೋಧನೆ ನಡೆಸಲು ಅಟ್ಲಾಂಟಿಕ್ ಸಾಗರದಲ್ಲಿ ಪರ್ಯಟನೆ ನಡೆಸುತ್ತಿದ್ದಾಗ ಆಳ ಸಮುದ್ರದಲ್ಲಿ ಈ ದೈತ್ಯ ಶಾರ್ಕ್ ಹಾವು ಪತ್ತೆಯಾಗಿದೆ. ಇಂತಹ ದೈತ್ಯಾಕಾರದ ಕಡಲ ಸರ್ಪದಂತಹ ಪ್ರಾಣಿಯನ್ನು 19ನೇ ಶತಮಾನದಲ್ಲಿ ಕೆಲವು ನಾವಿಕರು ನೋಡಿದ್ದರು ಎಂಬ ಉಲ್ಲೇಖ ಇದೆ ವಿಜ್ಞಾನಿಗಳು ತಿಳಿಸಿದ್ದಾರೆ.

## ಯಾರಿವರು? ನಿಮಗಿದು ಗೊತ್ತೆ

ಅಮೆರಿಕದ ವಾಯುಪಡೆಯ 24ನೇ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವ ಹೀಥರ್ ಆನ್ ವಿಲ್ಸನ್ ಅಲ್ಲಿನ ರಾಜಕಾರಣಿಗಳಲ್ಲೊಬ್ಬರು. 1960ರ ಡಿಸೆಂಬರ್ 30ರಂದು ಜನಿಸಿದ ಅವರು, 'ಅಂತಾರಾಷ್ಟ್ರೀಯ ಸಂಬಂಧಗಳ' ಕುರಿತು ಎಂಫಿಲ್, ಪಿಎಚ್‌ಡಿ ಪದವಿ ಪಡೆದರು. ಅವರ 'ಇಂಟರ್‌ನ್ಯಾಷನಲ್ ಲಾ ಆಂಡ್ ಯೂಸ್ ಆಫ್ ಫೋರ್ಸ್' ಎಂಬ ಕೃತಿ ಪ್ರಕಟವಾಗಿದೆ. ಸೌಥ್ ಡಕೋಟಾ ಸ್ಕೂಲ್ ಆಫ್ ಮೈನ್ಸ್ ಆಂಡ್ ಟೆಕ್ನಾಲಜಿಯ 18ನೇ ಹಾಗೂ ಮೊದಲ ಮಹಿಳಾ ಅಧ್ಯಕ್ಷರಾಗಿದ್ದ ಹೀಥರ್; ನಾಯಕತ್ವ, ಉನ್ನತ ಶಿಕ್ಷಣ, ಸರ್ಕಾರ ಮತ್ತು ಖಾಸಗಿ ಉದ್ಯಮಕ್ಷೇತ್ರಗಳಲ್ಲಿ 35 ವರ್ಷಗಳ ಅನುಭವವುಳ್ಳವರು. ಖಾಸಗಿ ಪೈಲಟ್ ಕೂಡ ಆಗಿರುವ ಅವರಿಗೆ ದಿ ಪೌಲ್ ರಿಚರ್ ಪ್ರಶಸ್ತಿ ಲಭಿಸಿದೆ.

## ✍️ *ಪ್ರಮುಖ ವ್ಯಕ್ತಿಗಳ ಬಗ್ಗೆ ವಿಶೇಷ ಮಾಹಿತಿ*✍️

### *ಕ್ಷೀರ ಪಿತಾಮಹ ವರ್ಗೀಸ್ ಕುರಿಯನ್*✍️

*ಭಾರತದ ಹಾಲಿನ ಮನುಷ್ಯ ಎಂದೇ ಪ್ರಖ್ಯಾತರಾಗಿರುವವರು ಕ್ಷೀರಪಿತಾಮಹ ವರ್ಗೀಸ್ ಕುರಿಯನ್. 'ಶ್ವೇತ ಕ್ರಾಂತಿ', 'ಕ್ಷೀರ ಕ್ರಾಂತಿ', 'ಆಪರೇಷನ್ ಫ್ಲಡ್' ಮುಂತಾದ ಪ್ರಖ್ಯಾತ ಹೆಸರುಗಳಿಂದ ಗುರುತಿಸಲ್ಪಡುವ ಪ್ರಪಂಚದಲ್ಲೇ ಬೃಹತ್ ಡೈರಿ ಅಭಿವೃದ್ಧಿ ಕಾರ್ಯ ಸಂಯೋಜನೆಯಾದ ಗುಜರಾತ್ ಹಾಲು ಉತ್ಪಾದಕರ ಒಕ್ಕೂಟವನ್ನು ನಿರ್ಮಿಸಿ ಹಾಲಿನ ಹೊಳೆಯನ್ನೇ ಹರಿಸಿದ 'ಹಾಲಿನ ಮನುಷ್ಯ' ಡಾ. ವರ್ಗೀಸ್ ಕುರಿಯನ್. 'ಅಮುಲ್' ಎಂಬುದು ಇಂದು ವಿಶ್ವದಲ್ಲೇ ಜನಪ್ರಿಯವಾದ ಹೆಸರು. ಆ ಹೆಸರಿನ ಹಿಂದಿರುವ ತಾರೆ ಈ ಕುರಿಯನ್.*

*ವರ್ಗೀಸ್ ಕುರಿಯನ್ ಅವರು ನವೆಂಬರ್ 26, 1921ರಲ್ಲಿ ಕೇರಳದ ಕೊಯಿಕೋಡಿನಲ್ಲಿ ಜನಿಸಿದರು. ಅವರು ಮದ್ರಾಸಿನಲ್ಲಿ ಭೌತಶಾಸ್ತ್ರವನ್ನು ಅಭ್ಯಸಿಸಿ ಪದವೀಧರರಾಗುವುದರ ಜೊತೆಗೆ ಬಿ.ಇ ಮೆಕ್ಯಾನಿಕಲ್ ಇಂಜಿನಿಯರ್ ಆದರು. ಅಮೆರಿಕದಲ್ಲಿ ಸ್ನಾತಕೋತ್ತರ ಮೆಕಾನಿಕಲ್ ಇಂಜಿನಿಯರಿಂಗ್ ಪದವಿ ಪಡೆದರು. ಜಮಷೆಡಪುರದಲ್ಲಿ ಟಾಟಾ ಸಂಸ್ಥೆಯಲ್ಲಿಯೂ ನಂತರದಲ್ಲಿ ಬೆಂಗಳೂರಿನ ಡೈರಿ ಸಂಶೋಧನಾ ಸಂಸ್ಥೆಯಲ್ಲಿಯೂ ತರಬೇತಿ ಗಳಿಸಿದರು.*

*ಅಮೆರಿಕದಿಂದ 1948ರಲ್ಲಿ ಭಾರತಕ್ಕೆ ಹಿಂದಿರುಗಿದ ವರ್ಗೀಸ್ ಕುರಿಯನ್ನರು ಸರ್ಕಾರಿ ಸೇವೆಗೆ ಸೇರಿ ಆನಂದ್ ನಗರದಲ್ಲಿದ್ದ ಹಾಲಿನ ಪೌಡರ್ ಉತ್ಪಾದಿಸುವ ಸಣ್ಣ ಘಟಕವೊಂದರಲ್ಲಿ ತಂತ್ರಜ್ಞರಾಗಿ ಕೆಲಸಕ್ಕೆ ಸೇರಿದರು. ಇದೇ ಸಮಯದಲ್ಲಿ ಕೈರಾ ಜಿಲ್ಲೆಯ ಹಾಲು ಉತ್ಪಾದನಾ ಸಂಘಟನೆಯು ತನ್ನ ಉಳಿಗಾಲಕ್ಕಾಗಿ ಕಷ್ಟಪಡುತ್ತಿದ್ದುದನ್ನು ಗಮನಿಸಿದ ಕುರಿಯನ್ನರು, ಸರ್ಕಾರಿ ಸೇವೆಯನ್ನು ತ್ಯಜಿಸಿ ಆ ಸಂಸ್ಥೆಗೆ ಜೀವ ತುಂಬಲು ಸ್ವಯಂ ಪ್ರೇರಣೆಯಿಂದ ಮುಂದೆ ಬಂದರು. ವರ್ಗೀಸ್ ಕುರಿಯನ್ನರ ಈ ಸಾಹಸ 'ಅಮುಲ್' ಎಂಬ ಹೊಸ ಚರಿತ್ರೆಗೆ ನಾಂದಿಹಾಡಿತು.*

*ಗುಜರಾತ್ ಹಾಲಿನ ಒಕ್ಕೂಟದ ಯಶಸ್ಸು ಲಾಲ್ ಬಹದ್ದೂರ್ ಶಾಸ್ತ್ರಿ ಅವರನ್ನು ರಾಷ್ಟ್ರೀಯ ಡೈರಿ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲು ಪ್ರೇರೇಪಿಸಿ ಡಾ. ವರ್ಗೀಸ್ ಕುರಿಯನ್ ಅವರನ್ನು ಅದರ ಅಧ್ಯಕ್ಷರನ್ನಾಗಿ ನೇಮಿಸುವಂತೆ ಮಾಡಿತು. ಹೀಗೆ 1965ರ ವರ್ಷದಲ್ಲಿ ಲಾಲ್ ಬಹದ್ದೂರ್ ಶಾಸ್ತ್ರಿ ಅವರಿಂದ ರಾಷ್ಟ್ರೀಯ ಹಾಲು ಉತ್ಪಾದನಾ ನಿಗಮಕ್ಕೆ ಅಧ್ಯಕ್ಷರೆಂದು ನೇಮಿಸಲ್ಪಟ್ಟ ವರ್ಗೀಸ್ ಕುರಿಯನ್ನರು ಮುಂದೆ 1973ರಲ್ಲಿ ಗುಜರಾತ್ ಕೋ-ಆಪರೇಟಿವ್

ಮಿಲ್ಕ್ ಮಾರ್ಕೆಟಿಂಗ್ ಫೆಡರೇಶನ್ ಸ್ಥಾಪಿಸಿ ಹಾಲಿನ ಉತ್ಪನ್ನಗಳನ್ನು ಮಾರುಕಟ್ಟೆಯಲ್ಲಿ ಸಮರ್ಥವಾಗಿ ವಿತರಣೆಯಾಗುವಂತೆ ವ್ಯವಸ್ಥೆ ಮಾಡಿದರು. ಹೀಗೆ ವರ್ಗೀಸ್ ಕುರಿಯನ್ನರು ಭಾರತವನ್ನು ಅತ್ಯಂತ ಬೃಹತ್ ಹಾಲು ಉತ್ಪಾದನಾ ದೇಶವನ್ನಾಗಿ ಮಾಡಿದರು.*

*ಅತ್ಯಂತ ಕುಶಲ ಹಾಗೂ ಶ್ರಮಭರಿತ ದುಡಿಮೆಗೆ ಹೆಸರಾದ ವರ್ಗೀಸ್ ಕುರಿಯನ್ನರು ಯಾವುದೇ ಪ್ರತೀಕೂಲ ಪರಿಸ್ಥಿತಿ ಇದ್ದಾಗ್ಯೂ ಹೇಗೆ ಒಬ್ಬ ವ್ಯಕ್ತಿ ಇಡೀ ಸಮಾಜಕ್ಕೆ ದೇಶಕ್ಕೆ ದಾರಿ ದೀಪವಾಗಬಹುದು ಎಂಬುದನ್ನು ಭಾರತೀಯ ಸಮಾಜದಲ್ಲಿ ಸಮರ್ಥವಾಗಿ ಪ್ರತಿಬಿಂಬಿಸಿದ್ದು, ಭಾರತೀಯ ಗ್ರಾಮೀಣ ಅಭಿವೃದ್ಧಿಯ ಆಸಕ್ತಿಯುಳ್ಳ ಹಲವಾರು ಸಂಘಟನೆಗಳ ನೇತಾರರು ಮಾರ್ಗದರ್ಶಕರು ಕೂಡಾ ಆಗಿದ್ದರು.*

*ವಿಶ್ವ ಆಹಾರ ಪ್ರಶಸ್ತಿ, ಮ್ಯಾಗ್ಸೇಸೆ ಪ್ರಶಸ್ತಿ, ಪದ್ಮಶ್ರೀ, ಪದ್ಮಭೂಷಣ, ಪದ್ಮವಿಭೂಷಣ, ಕೃಷಿರತ್ನ ಪ್ರಶಸ್ತಿಗಳು, ಹಲವು ವಿಶ್ವ ವಿದ್ಯಾಲಯದ ಡಾಕ್ಟರೇಟ್, ಹಲವಾರು ಅಂತರರಾಷ್ಟ್ರೀಯ ಪ್ರಶಸ್ತಿಗಳು ಹಾಗೂ ಇವೆಲ್ಲವನ್ನೂ ಮೀರಿದ ಜನಪ್ರಿಯತೆ, ಜನನಂಬುಗೆ ಕುರಿಯನ್ ಅವರನ್ನು ಅರಸಿ ಬಂದಿದವು. ಶ್ಯಾಮ್ ಬೆನಗಲ್ ಅವರ 'ಮಂಥನ್' ಅಂತಹ ಸುಂದರ ಚಿತ್ರಗಳು ಸಹಾ ವರ್ಗೀಸ್ ಕುರಿಯನ್ನರ ಕಾಯಕದ ಪ್ರೇರಣೆ ಹೊಂದಿವೆ. ಅವರ ಕುರಿತ ಆಡಿಯೋ ಪುಸ್ತಕವಾದ 'The man who made elephant dance' ಕೃತಿಯನ್ನು ಬಿಡುಗಡೆ ಮಾಡಿದ ಸಮಯದಲ್ಲಿ ಎನ್ ಆರ್ ನಾರಾಯಣ ಮೂರ್ತಿ ನುಡಿದರು: "ವರ್ಗೀಸ್ ಕುರಿಯನ್ ಅವರಿಗಿಂತ ಭಾರತ ರತ್ನ ಪ್ರಶಸ್ತಿಗೆ ಮತ್ತ್ಯಾರು ತಾನೇ ಅರ್ಹರಿರಲು ಸಾಧ್ಯ. ಅವರಿಗೆ ಭಾರತ ರತ್ನ ಪ್ರಶಸ್ತಿಯನ್ನು ನೀಡಿ ನಮಿಸದಿರುವುದು ದುರದೃಷ್ಟಕರ" ಎಂದು ನುಡಿದಿದ್ದರು. ಈ ಕೃತಿ ವರ್ಗೀಸ್ ಕುರಿಯನ್ ಅವರ 'I too had a dream' ಅನ್ನು ಆಧರಿಸಿದೆ.*

*ಈ ಮಹಾನ್ ಸಾಧಕರಾದ ಡಾ. ವರ್ಗೀಸ್ ಕುರಿಯನ್ ಅವರು ಸೆಪ್ಟೆಂಬರ್ 9, 2012ರ ವರ್ಷದಲ್ಲಿ ಈ ಲೋಕವನ್ನಗಲಿದರು. ಈ ಮಹಾನ್ ಚೇತನಕ್ಕೆ ನಮ್ಮ ನಮನ.*

••••• ಮಾಹಿತಿ ವೇದಿಕೆ ••••••••

## ಯಾರಿವರು ನಿಮಗೆ ಗೊತ್ತೇ

ಭಾರತದ ಅಪ್ರತಿಮ ಕಮ್ಯುನಿಸ್ಟ್ ನಾಯಕಿಯರಲ್ಲೊಬ್ಬರು ಸುಶೀಲಾ ಗೋಪಾಲನ್. 1929ರ ಡಿಸೆಂಬರ್ 29ರಂದು ಕೇರಳದಲ್ಲಿ ಜನಿಸಿದ ಅವರು, 18ನೇ ವಯಸ್ಸಿನಲ್ಲೇ 1948ರಲ್ಲಿ ಕಮ್ಯುನಿಸ್ಟ್ ಪಕ್ಷ ಸೇರಿದ್ದರು. ವಿದ್ಯಾರ್ಥಿಯಾಗಿರುವಾಗಲೇ ತೆಂಗು-ನಾರು ಕಾರ್ಮಿಕರ ಸಂಘಟನೆಯಲ್ಲಿ ತೊಡಗಿದ್ದ ಅವರು ಜೀವನಪರ್ಯಂತ ಕಾರ್ಮಿಕ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದರು. 1964ರಲ್ಲಿ ಪಕ್ಷ ಇಬ್ಭಾಗವಾದಾಗ ಸಿಪಿಐ(ಎಂ) ಸೇರಿದ ಸುಶೀಲಾ ಕೇರಳ ರಾಜ್ಯ ಸಮಿತಿಯ ಸದಸ್ಯರಾದರು. 1996 ಮತ್ತು 2001ರ ಮಧ್ಯೆ ಕೇರಳದ ಸರ್ಕಾರದಲ್ಲಿ ಮಂತ್ರಿಯಾಗಿದ್ದರು. ಮೂರು ಬಾರಿ ಲೋಕಸಭೆಗೂ ಅಯ್ಕೆಯಾಗಿದ್ದರು. 2001ರ ಡಿಸೆಂಬರ್ 19ರಂದು ತಿರುವನಂತಪುರದಲ್ಲಿ ನಿಧನ ಹೊಂದಿದರು.

## *ಆಲ್ಫ್ರೆಡ್ ನೊಬೆಲ್*✍

*ಜನನ :21- ಅಕ್ಟೋಬರ್-1833*

*ಮರಣ : 10 ಡಿಸೆಂಬರ್ 1896 ( ತೀರಿದಾಗ ವಯಸ್ಸು 63 ) ಇನ್ರೇಮೊ,ಇಟಲಿ*

*ಸಮಾಧಿ ಸ್ಥಳ: ನೊರ್ರ* *ಬೆಗ್ರಾವ್ನಿನ್ ಸ್ಪ್ಲಾತ್ಸೆನ್*

*ವೃತ್ತಿ: ರಸಾಯನ ಶಾಸ್ತ್ರಜ್ಞ ,ಎಂಜಿನಿಯರ್ ,ಆವಿಷ್ಕಾರಿ ,ಆಯುಧಗಳ ಉತ್ಪಾದಕ*

*ಇದಕ್ಕೆ ಪ್ರಶಸ್ತಿ : ಡೈನಮೋನ ಆವಿಷ್ಕಾರ, ನೋಬೆಲ್ ಪ್ರಶಸ್ತಿ*

*ಇಂದು ಆಲ್ಫ್ರೆಡ್ ನೊಬೆಲ್ ರ ಹೆಸರನ್ನು ಅರಿಯದವರು ಜಗತ್ತಿನಲ್ಲಿ ಇಲ್ಲವೇ ಇಲ್ಲ. ಅವರ ಹೆಸರು ಅಷ್ಟು ಸುಪರಿಚಿತವಾಗಿದೆ. ಅವರು ಇಷ್ಟು ಸುಪರಿಚಿತನಾಗಲು ಕಾರಣವೆಂದರೆ ಮಾನವಕುಲದ ಕ್ಷೇಮಾಭಿವೃದ್ದಿಗೆ ಸೇವೆ ಸಲ್ಲಿಸುವವರಿಗೆ ಪಾರಿತೋಷಕಗಳನ್ನು ನೀಡಲು ತನ್ನ ಅಪಾರ ಸಂಪತ್ತನ್ನೆಲ್ಲ ಅವರು ಮುಡಿಪಾಗಿಟ್ಟದ್ದು. ಆಲ್ಫ್ರೆಡ್ ನೊಬೆಲ್ ಸ್ವೀಡನ್ ದೇಶದವರು. ಅವರು ೧೮೩೩ ರಲ್ಲಿ ಜನಿಸಿದರು. ಸುರಕ್ಷಿತವಾದ ಸ್ಫೋಟಕಗಳನ್ನು ಕಂಡು ಹಿಡಿಯುವುದರಲ್ಲಿ ಅವರಿಗೆ ಆಸಕ್ತಿ ಇತ್ತು. ೧೮೬೩ರಲ್ಲಿ ಅವರ ಕುಟುಂಬದ ನೈಟ್ರೊಗ್ಲಿಸರಿನ್ ಕಾರ್ಖಾನೆ ಸ್ಫೋಟಕ ವಸ್ತು ಸಿಡಿದು ನಾಶವಾದಾಗ ಆಲ್ಫ್ರೆಡ್ ನೊಬೆಲ್ ತಮ್ಮ ಪ್ರಯೋಗಗಳನ್ನು ಅತ್ಯಂತ ಕಷ್ಟದ ಪರಿಸ್ಥಿತಿಯಲ್ಲಿ ಮುಂದುವರಿಸಬೇಕಾಯಿತು. ಮೂಲತಃ ವಿಲಕ್ಷಣ ಸ್ವಭಾವದವರಾಗಿದ್ದ ಅವರು ದುಂದು ವೆಚ್ಚಗಾರರಾಗಿದ್ದರು. ಬೇಕೆಂದಲ್ಲಿಗೆ ಹೋಗಿ ಬರುತ್ತಿದ್ದರು. ಅವರ ಬ್ರಹ್ಮಚರ್ಯ ಬದುಕೂ ಅವರ ಈ ವಿಲಕ್ಷಣ ಸ್ವಭಾವಕ್ಕೆ ಇಂಬಾಗಿತ್ತು. ಪಟ್ಟು ಬಿಡದೆ ಮಾಡಿದ ಪ್ರಯೋಗಗಳ ಫಲವಾಗಿ ಆಲ್ಫ್ರೆಡ್ ನೊಬೆಲ್ ಕೊನೆಗೂ ಮೊತ್ತ ಮೊದಲನೆಯ, ಪರಿಣಾಮಕಾರಿಯಾದ ಸುರಕ್ಷಿತ ಸ್ಫೋಟಕ ವಸ್ತು ಡೈನಾಮೈಟ್ ಅನ್ನು ಕಂಡು ಹಿಡಿಯುವುದರಲ್ಲಿ ಸಫಲರಾದರು. ತಾವು ಕಂಡು ಹಿಡಿದ ಡೈನಾಮೈಟ್ ಗೆ ೧೮೬೬ರಲ್ಲಿ ಗ್ರೇಟ್ ಬ್ರಿಟನ್ ನಲ್ಲೂ, ೧೮೬೭ರಲ್ಲಿ ಸಂ. ರಾ. ಅಮೆರಿಕದಲ್ಲೂ ಪೇಟೆಂಟ್ (ಸ್ವಾಮ್ಯದ ಹಕ್ಕು) ಪಡೆದರು. ೧೮೮೮ರಲ್ಲಿ ಅವರು ಮೊತ್ತ ಮೊದಲನೆಯ ಹೊಗೆರಹಿತ ನೈಟ್ರೊಗ್ಲಿಸರಿನ್ ಪೌಡರ್ ಗಳಲ್ಲೊಂದಾದ ಬಾಲಿಸ್ಟೈಟ್ ಅನ್ನು ಉತ್ಪಾದಿಸಿದರು. ಸ್ಫೋಟಕಗಳ ಉತ್ಪಾದನೆಯಿಂದ ಮತ್ತು ರಶಿಯದ ಬಕು ತೈಲ ಕ್ಷೇತ್ರಗಳಿಂದ ಲಭ್ಯವಾದ ಸಂಪಾದನೆಯಿಂದ ಅವರು ಅಪಾರ ಸಂಪತ್ತು ಗಳಿಸಿದರು. ಉತ್ತರಾಧಿಕಾರಿಗಳಿಗೆ ಆಸ್ತಿಯನ್ನು ಬಿಟ್ಟು ಹೋಗುವ ಪದ್ಧತಿಯನ್ನು ಆಲ್ಫ್ರೆಡ್ ನೊಬೆಲ್ ವಿರೋಧಿಸಿದರು. ಅಂತಲೇ ಅವರು ತಮ್ಮ ಆಸ್ತಿಯನ್ನೆಲ್ಲ ಮಾನವಕುಲದ ಹಿತಕ್ಕಾಗಿ ಶ್ರಮಿಸುವ, ಸೇವೆ ಸಲ್ಲಿಸುವ ವ್ಯಕ್ತಿಗಳಿಗೆ ಪಾರಿತೋಷಕ ನೀಡಲು ಕೊಡಮಾಡಿದರು. ಆಲ್ಫ್ರೆಡ್ ನೊಬೆಲ್ ೧೮೯೬ರಲ್ಲಿ ನಿಧನ ಹೊಂದಿದರು. ವಿಜ್ಞಾನ (ಭೌತಶಾಸ್ತ್ರ, ರಸಾಯನಶಾಸ್ತ್ರ, ವೈದ್ಯಕೀಯಶಾಸ್ತ್ರ), ಅರ್ಥಶಾಸ್ತ್ರ, ಸಾಹಿತ್ಯ ಹಾಗೂ ವಿಶ್ವಶಾಂತಿಯ ಕ್ಷೇತ್ರಗಳಲ್ಲಿ ದುಡಿದವರಿಗೋಸ್ಕರ ಪ್ರತಿವರ್ಷ ನೀಡಲಾಗುವ ನೊಬೆಲ್ ಪಾರಿತೋಷಕ ಆಲ್ಫ್ರೆಡ್ ನೊಬೆಲ್ ರ ಕೊಡುಗೆ. ಗಣಿತಶಾಸ್ತ್ರಕ್ಕೆ*

***ನೋಬೆಲ್ ಏಕಿಲ್ಲ?***

*ಪ್ರಪಂಚದ ಪ್ರಸಿದ್ಧ ಪ್ರಶಸ್ತಿಯಾದ ನೋಬೆಲ್ ಪಾರಿತೋಷಕ ಗಣಿತ ವಿಭಾಗಕ್ಕೆ ಮಾತ್ರ ನೀಡಲಾಗುವುದಿಲ್ಲ. ಇದಕ್ಕೊಂದು ಸ್ವಾರಸ್ಯಕರವಾದ ಇತಿಹಾಸವಿದೆ, ನೋಬೆಲ್ ಪಾರಿತೋಷಕನಾದ ಆಲ್ಫ್ರೆಡ್ ನೋಬೆಲ್ ಅವರ ಪ್ರೇಯಸಿ ಅವರನ್ನು ಬಿಟ್ಟು ಒಬ್ಬ ಗಣಿತಜ್ಞನ ಜೊತೆ ಹೋಗಿದ್ದರು ಎಂಬ ಕಾರಣವಿದೆ. (ಅನೇಕರು ಹೇಳುವ ಪ್ರಕಾರ ಅವರ ಪ್ರೇಯಸಿ ಮೆಚ್ಚಿದ ಗಣಿತಜ್ಞ ಸ್ವೀಡಿಶ್ ಮೂಲದ ಗೋಸ್ಟಾ ಮಿಟ್ಟ್ಯಾಗ್ ಲೆಫ್ಲ್ಲರ್). ಈ ಕಾರಣಕ್ಕಾಗಿಯೇ ಗಣಿತಜ್ಞರ ಮೇಲಿನ ಕೋಪದಿಂದ ನೋಬೆಲ್ ಅವರು ಗಣಿತ ವಿಭಾಗಕ್ಕೆ ಪಾರಿತೋಷಕವನ್ನು ನೀಡಕೂಡದೆಂದು ತಮ್ಮ ಉಯಿಲಿನಲ್ಲಿಯೂ ಸೇರಿಸಿದ್ದಾರೆ. ಆಲ್ಫ್ರೆಡ್ ಅವರ ವಿಚಿತ್ರ ಸ್ವಭಾವವು ಸಹ ಈ ಕಾರಣಕ್ಕೆ ಪೂರಕವಾಗಿದೆ*

ಯಾರಿವರು ನಿಮಗೆ ಗೊತ್ತೇ

1861 ರಲ್ಲಿ ಜನಿಸಿದ ಇವರು ಆಫ್ರಿಕನ್ ಅಮೆರಿಕನ್ ಕೃಷಿ ರಾಸಾಯನ ಶಾಸ್ತ್ರಜ್ಞ ಮತ್ತು ಕೃಷಿಕರಾಗಿದ್ದರು.

2. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಜೀತ ಪದ್ಧತಿ ಜೀವಂತವಾಗಿದ್ದ ಸಮಯದಲ್ಲಿ ಇವರು ಜೀತ ಕುಟುಂಬವೊಂದರಲ್ಲಿ ಜನಿಸಿದರು.

3. ಇವರು ನೆಲಗಡಲೆಯಿಂದ ಸುಮಾರು 300 ಉತ್ಪನ್ನಗಳನ್ನು ಅಭಿವೃದ್ಧಿಗೊಳಿಸಿದ್ದಾರೆ. ಈ ಪೈಕಿ ನೆಲಗಡಲೆ ಹಾಲು, ಹಿಟ್ಟು, ಶಾಯಿ, ಬಣ್ಣ, ಔಷಧೀಯ ಎಣ್ಣೆ ಮತ್ತು ಕಾಸ್ಮೆಟಿಕ್‌ಗಳು ಪ್ರಮುಖವಾದವು.

4. ಇದಲ್ಲದೆ ಇವರು ಗೆಣಸಿನಿಂದ 118 ಉತ್ಪನ್ನಗಳನ್ನು ಅಭಿವೃದ್ಧಿಗೊಳಿಸಿದ್ದಾರೆ.

5. ಇವರು ಬೆಳೆ ವೈವಿಧ್ಯೀಕರಣವನ್ನು ಪ್ರೋತ್ಸಾಹಿಸಿದ್ದರು, ಕೃಷಿ ಮತ್ತು ಮಣ್ಣು ಸಂರಕ್ಷ ಣಾ ವಿಧಾನಗಳನ್ನು ಸುಧಾರಣೆ ಮಾಡಿದ್ದರು. ಇವರು ಕೃಷಿ ಶಿಕ್ಷ ಣದ ಅಗತ್ಯವನ್ನೂ ಪ್ರತಿಪಾದಿಸಿದ್ದಾರೆ.

ಉತ್ತರ: ಜಾರ್ಜ್ ವಾಷಿಂಗ್ಟನ್ ಕರ್ವರ್

*ನಿಜವಾದ✍ ಹೀರೋಗಳಿವರು*

*ಅವರು ಯುವಕರು... ಅಪ್ರತಿಮ ಧೈರ್ಯ, ಸಾಹಸ ಪ್ರವೃತ್ತಿ, ತೇಜಸ್ಸು ಮತ್ತು ಸದ್ಗುಣಗಳು ಅವರಲ್ಲಿತ್ತು.. ಅವರಲ್ಲಿದ್ದ ನಾಯಕತ್ವ ಮತ್ತು ಪ್ರಚಲಿತ ವಿದ್ಯಮಾನಗಳನ್ನು ಕುರಿತ ಜ್ಞಾನದಿಂದ ಅವರು ಏನನ್ನಾದರೂ ಸಾಧಿಸಬಹುದಿತ್ತು.. ಅದು ಬ್ರಿಟಿಷರು ಭಾರತೀಯರನ್ನು ದಾಸ್ಯದಲ್ಲಿಟ್ಟು ಆಳುತ್ತಿದ್ದ ಕಾಲ. ಆ ಮೂವರೂ ಯಾವುದೇ ಅಧಿಕಾರದ ಆಮಿಷಕ್ಕೆ ಒಳಗಾಗಲಿಲ್ಲ, ತಾವೇ ವಿಧಿಸಿಕೊಂಡ ದೇಶರಕ್ಷಣೆಯ ಕಟ್ಟುಪಾಡುಗಳನ್ನು ಮೀರದೆ ಆಂಗ್ಲರಿಂದ ದೇಶವನ್ನು ಮುಕ್ತಗೊಳಿಸಲು ಯಾವ ತ್ಯಾಗವನ್ನಾದರೂ ಮಾಡಲು ಸಿದ್ಧರಾದರು. ಅಂತೆಯೇ ತಮ್ಮ ಪ್ರಾಣವನ್ನೂ ದೇಶಕ್ಕಾಗಿ ಅರ್ಪಿಸಿದರು. ಈ ದೇಶ ಎಂದೂ ಮರೆಯದ ಮರೆಯಲಾಗದ ಯುವಚೇತನರು ಈ ಮೂವರು.. ನಮ್ಮ ಇಂದಿನ ಯುವಶಕ್ತಿಗೆ ನಿಜವಾದ ಮಾದರಿ ಇವರೇ...!*

*ಸರ್ದಾರ್ ಭಗತ್ ಸಿಂಗ್:*

*ಜನನ: 28 ಸೆಪ್ಟೆಂಬರ್, 1907, ಸ್ಥಳ: ಪಂಜಾಬಿನ ಲ್ಯಾಲ್ ಪುರ್ ಜಿಲ್ಲೆ.*

*ಹಿಂದೂಸ್ಥಾನ್ ಸೋಷಿಯಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್ ಸಂಸ್ಥೆಯ ರೂವಾರಿ.*

*ಕೆಚ್ಚೆದೆಯ ಹೋರಾಟಗಾರ.*

*ಶಿವರಾಮ ಹರಿ ರಾಜಗುರು:*

*ಆಗಸ್ಟ್ 24, 1908ರಲ್ಲಿ ಪುಣೆಯ ಬಳಿಯ 'ಖೇಡ್' ಎಂಬ ಪಟ್ಟಣದಲ್ಲಿ ಜನನ.*

*ಸಂಸ್ಕೃತ ಭಾಷೆಯ ಪಾಂಡಿತ್ಯ.*

*'ಶಿವಾಜಿ ಮಹಾರಾಜ'ನ ಗೆರಿಲ್ಲಾ ಯುದ್ಧ ವೈಖರಿಯ ನಿಪುಣತೆ.*

*ಸುಖದೇವ ಥಾಪರ್:

15, ಮೇ 1907ರಲ್ಲಿ ಪಂಜಾಬಿನ ಲೂಧಿಯಾನದಲ್ಲಿ ಜನನ.*

*ಪಂಜಾಬಿನ ಮತ್ತೊಂದು ಹುಲಿ. ಸಂಘಟನಾ ಚಾತುರ್ಯ.*

*ವೈಜ್ಞಾನಿಕ ವಿಚಾರಗಳೊಂದಿಗೆ ಕ್ರಾಂತಿಕಾರಕ ಆಲೋಚನೆಗಳು.*

*'ನೌಜವಾನ್ ಭಾರತ್ ಸಭಾ' ಪತ್ರಿಕೆಯ ಸಂಸ್ಥಾಪಕ.*

*ಪಂಜಾಬಿನ ಲ್ಯಾಲ್ ಪುರ್ ಜಿಲ್ಲೆಯ 'ಬಾಂಗಾ' ಎಂಬ ಹಳ್ಳಿಯಲ್ಲಿ 28 ಸೆಪ್ಟೆಂಬರ್, 1907ರಂದು ಜನ್ಮ ತಳೆದವನು 'ಸರ್ದಾರ್' ಭಗತ್ ಸಿಂಗ್. ಅವನು ಜನಿಸಿದ ದಿನದಂದೇ ಅವನ ತಂದೆ ಮತ್ತು ಚಿಕ್ಕಪ್ಪಂದಿರು ಜೈಲಿನಿಂದ ಬಂಧಮುಕ್ತರಾದರು. ಅವರು ಬ್ರಿಟಿಷರ ವಿರುದ್ಧ ಸ್ವಾತಂತ್ರ ಹೋರಾಟದಲ್ಲಿ 'ಗದಾರ್ ಪಕ್ಷ'ದೊಂದಿಗೆ ಗುರುತಿಸಿಕೊಂಡಿದ್ದರು. ತನ್ನ ತಂದೆ ಚಿಕ್ಕಪ್ಪಂದಿರ ನಡುವೆ ತೇಜಸ್ವೀ ಬಾಲಕನಾಗಿ ಬೆಳೆಯುತ್ತಿದ್ದ ಬಾಲಕ ಭಗತ್ ನನ್ನು ಪರಿವಾರದವರು ಯಾವುದೇ ಆಂಗ್ಲ ಶಾಲೆಗೆ ಕಳುಹಿಸಲಿಚ್ಛಿಸದ ಕಾರಣ ದಯಾನಂದ ಸರಸ್ವತಿಯವರ ಆರ್ಯ ಸಮಾಜದ ಸಂಸ್ಕಾರದಲ್ಲಿ ಬೆಳೆದನು. ತನ್ನ ಬಾಲ್ಯದಿಂದಲೇ ದೇಶಭಕ್ತಿಯ ಕಿಚ್ಚನ್ನು ಹೊತ್ತಿದ್ದ ಭಗತ್ ನನ್ನು ದಯಾನಂದರ ಶಾಲೆಗೆ ಸೇರಿಸಿ, ನಂತರ ಲಾಲಾ ಲಜಪತ್ ರಾಯರ ಕಾಲೇಜು ಸೇರಿ ವಿದ್ಯಾಭ್ಯಾಸ ಮುಂದುವರೆಸಬೇಕಾಯಿತು. ಶಾಲಾ-ಕಾಲೇಜು ಹಂತದಲ್ಲಿಯೇ ಭಗತ್ ಸ್ವಾತಂತ್ರದ ಕನಸನ್ನು ಹೊತ್ತಿದ್ದು, ನಾಟಕ ಪ್ರಾತ್ಯಕ್ಷಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲದೆ, ಅತ್ಯುತ್ತಮ ವಾಗ್ಮಿಯಾಗಿಯೂ ದೇಶಭಕ್ತಿಯನ್ನು ಪ್ರತಿಬಿಂಬಿಸುವ ಗೀತೆಗಳನ್ನೂ ರಚಿಸಿ ಹಾಡುತ್ತಿದ್ದನು. ಅವನ ಬದುಕಿನಲ್ಲಿನ ಮಹತ್ವದ ಪರಿವರ್ತನೆ ಬಂದದ್ದು ಮುಂದೆ ಅವನು 1919ರಲ್ಲಿ ಜಲಿಯನ್ ವಾಲಾ ಬಾಗ್ ಹತ್ಯಾಕಾಂಡ ನಡೆದ ಸ್ಥಳವನ್ನು ಕಣ್ಣಾರೆ ಕಂಡಾಗಲೇ!*

*ಮುಗ್ಧ ಭಾರತೀಯರ ಮೇಲೆ ಬ್ರಿಟಿಷರು ನಡೆಸಿದ ಧಾಳಿ ಮತ್ತು ನರಮೇಧದ ಘಟನೆಯ ವರದಿ ಅವನಲ್ಲಿನ ಕ್ರಾಂತಿಯ ಕಿಚ್ಚನ್ನು ಇಮ್ಮಡಿಸಿತು. ಮುಂದೆ, ಬ್ರಿಟಿಷರ ವಿರುದ್ಧದ ಅಸಹಕಾರ ಚಳುವಳಿಯಲ್ಲಿ ಪಾಲ್ಗೊಂಡನು. ಆದರೆ ಅವನ ಮೇಲೆ ಇನ್ನೂ ಹೆಚ್ಚು ಪರಿಣಾಮವಾದದ್ದು ಬ್ರಿಟಿಷ್ ಆಳ್ವಿಕೆಯ ಮುಖ್ಯ ಸಂಸ್ಥಾನಗಳಲ್ಲಿ ಒಂದಾಗಿದ್ದ 'ಚೌರೀ-ಚೌರಾ'ದಲ್ಲಿ ನಡೆದ ಘಟನೆಯಿಂದ. ಬ್ರಿಟಿಷ್ ಪೋಲೀಸರ ವಿರುದ್ಧ ದಂಗೆ ಎದ್ದಿದ್ದ ಭಾರತೀಯರು ಸತತ ಆಘಾತಗಳನ್ನು ತಾಳಲಾರದೆ ರಕ್ಷಣೆಗಾಗಿ ತಾವೂ ಸಿಡಿದೆದ್ದು ಪೋಲಿಸರನ್ನು ಹೊಡೆದರು. ಇದರ ಪರಿಣಾಮವಾಗಿ ಈಗಾಗಲೇ 'ಸೈಮನ್ ಕಮಿಷನ್' ಮೂಲಕ 'ಬ್ರಿಟಿಷ್ ಪೋಲೀಸ್ ಕಾಯ್ದೆ'ಯಡಿಯಲ್ಲಿ' ನೂರಾರು ಭಾರತೀಯರನ್ನು ಬಂಧಿಸಿದ್ದರು. ಮುಗ್ಧ ರೈತರ ಮತ್ತು ತಮ್ಮ ಹಕ್ಕುಗಳಿಗಾಗಿ ಹೋರಾಡಿ ಸ್ವಾತಂತ್ರವನ್ನು ಬಯಸಿದ್ದ ನಾಗರೀಕರ ರಕ್ತಪಾತವಾಯ್ತು. ಇದೆಲ್ಲವೂ ನಡೆದದ್ದು, ಭಾರತದಲ್ಲಿ 1860ರವರೆಗೂ ಆಳ್ವಿಕೆಯಲ್ಲಿದ್ದ 'ಈಸ್ಟ್ ಇಂಡಿಯಾ ಕಂಪನಿ'ಯು ಭಾರತೀಯ ನಾಗರೀಕರು ಎಚ್ಚೆತ್ತು ತಮ್ಮ ವಿರುದ್ಧ ಹೋರಾಡಿ ತಮ್ಮ ದೇಶದ ರಕ್ಷಣೆಗಾಗಿ ನಿಂತಲ್ಲಿ, ತಮ್ಮ ಅಸ್ತಿತ್ವ ಮತ್ತು ಸರ್ಕಾರದಡಿಯಲ್ಲಿ ಭಾರತೀಯರು ಬದುಕಲಾರರು ಎಂದು ಅರಿವಾಗಿ ಭಾರತೀಯರ ಮೇಲೆ ತಂದೊಡ್ಡಿದ ಕಾನೂನುಗಳಿಂದ. ಬ್ರಿಟಿಷ್ ಸೇನೆಯೊಂದಿಗೆ ಈಗ ಕಾನೂನು ಸಹ ಭಾರತೀಯ ಪ್ರಜೆಗಳ ವಿರುದ್ಧ ತನ್ನ ಕಾರ್ಯಾಚರಣೆ ನಡೆಸಲಾರಂಭಿಸಿತ್ತು. ಇನ್ನು 'ಶಾಂತಿ' 'ಸಮಾಧಾನ'ಗಳಿಂದ ಬ್ರಿಟಿಷರ ದಾಸ್ಯದಿಂದ ಈ ದೇಶವನ್ನು ಬಂಧಮುಕ್ತವನ್ನಾಗಿ ಮಾಡವುದು ಅಸಾಧ್ಯ ಎಂದು ನಿರ್ಧರಿಸಿದ ಭಗತ್ ನ ಕ್ರಾಂತಿಕಾರಿ ಆಲೋಚನೆಗಳು ಯೋಜನೆಗಳಾಗಿ ನಂತರ ಕಾರ್ಯರೂಪಕ್ಕೆ ಬರಲಾರಂಭಿಸಿದವು.*

*ಈ ಮೂವರ ಮುಂದಿದ್ದ ಗುರಿಯೊಂದೇ!........*

*ಅವರಿಗೆ ಶಕ್ತಿಯ ಜೊತೆಗೆ ಯುಕ್ತಿಯಿಂದಲೇ ಶತೃಗಳನ್ನು ಗೆಲ್ಲಬೇಕೆಂಬ ಅರಿವಿತ್ತು. ಭಾರತದ ಹಿಂದಿನ ಇತಿಹಾಸ, ಅಂದಿನ ಪರಿಸ್ಥಿತಿ, ಬ್ರಿಟಿಷರಿಂದ ಭಾರತೀಯರ ಮೇಲೆ ಬಲವಂತವಾಗಿ ಹೇರಲ್ಪಟ್ಟಿದ್ದ ಕಾನೂನು ವ್ಯವಸ್ಥೆ. ಎಲ್ಲವನ್ನೂ ಅತಿ ಸೂಕ್ಷ್ಮವಾಗಿ ಅಧ್ಯಯನ ಮಾಡಿದ ಭಗತ್ ಸಿಂಗ್ ನ ಭರವಸೆಯ ಕಣ್ಣುಗಳಿಗೆ ಮುಂದಿನ ದಾರಿ ಸ್ಪಷ್ಟವಾಗಿತ್ತು! ಅದೇ ನಂತರ ಕಾರ್ಯರೂಪಕ್ಕೆ ಬರಲಾರಂಭಿಸಿತು. 1926ರಲ್ಲಿ ರಾಮ್ ಪ್ರಸಾದ್ ಬಿಸ್ಮಿಲ್, ಅಷಾಫ್ ಕುಲ್ಲಾ ಖಾನ್ ಮತ್ತು ಚಂದ್ರಶೇಖರ್ ಆಜಾದ್ ರಿಂದ ಸ್ಥಾಪಿಸಲ್ಪಟ್ಟಿದ್ದ 'ಹಿಂದೂಸ್ಥಾನ್ ರಿಪಬ್ಲಿಕನ್ ಅಸೋಸಿಯೇಷನ್' ಸೇರಿದ ಭಗತ್ ಮುಂದೆ ಅದೇ ಸಂಘಟನೆಯನ್ನು ಸದೃಢಗೊಳಿಸಿದ. ನಂತರದ ದಿನಗಳಲ್ಲಿ ತನ್ನ ಸ್ವಗೃಹವನ್ನೂ ತೊರೆದನು. ತನ್ನ ಮನೆಯಲ್ಲಿದ್ದರೆ ಮದುವೆಯಾಗಿ ಕೊನೆಗೆ ಸ್ವಾರ್ಥದಿಂದ ತನಗಾಗಿ ಬದುಕಿ ದೇಶಕ್ಕೇನೂ ಮಾಡಲಾರೆನೆಂದು ಅರಿತ ಅವನದು ಕಠಿಣ ನಿರ್ಧಾರವಾಗಿತ್ತು.ತನ್ನ ಮುಂದಿನ ಬದುಕು ಈ ದೇಶಕ್ಕಾಗಿಯೇ! ಇನ್ಯಾವ ಸಂಸಾರ ಮೋಹದಂತಹ ಆಸೆಗಳು ತನ್ನನ್ನು ಬದಲಿಸಲಾರದೆಂದು ಪತ್ರ ಬರೆದಿಟ್ಟು ತೆರಳಿದ.*

*ಹೀಗೆ ಹೊರಟ ಅವನ ಮುಂದಿನ ದಾರಿ ಕಾನ್ಪುರ. ತನ್ನ ಚಟುವಟಿಕೆಗಳಿಂದ ಬ್ರಿಟಿಷರಿಂದ ಮೊದಲ ಬಾರಿ 1927ರಲ್ಲಿ ಬಂಧನಕ್ಕೊಳಗಾದ ಭಗತ್ ಅದರಿಂದ ಹೆದರಲಿಲ್ಲ. ತನ್ನ ದೇಶಕ್ಕಾಗಿ ಮನೆ, ತನ್ನವರು ಮತ್ತು ತನ್ನದಾಗಿದ್ದ ಎಲ್ಲವನ್ನೂ ತ್ಯಾಗ ಮಾಡಿದ್ದ ಭಗತ್ ನಲ್ಲಿ ಬ್ರಿಟಿಷ್-ಬಂಧಮುಕ್ತ ಭಾರತದ ನಿರ್ಮಾಣದ ಕನಸೊಂದೇ ನಿರಂತರವಾಗಿ ಕಾಡಿದ್ದು!*

*ಅಂದಿನ ಭಾರತದ ಮೇಲಿದ್ದ ಬ್ರಿಟಿಷ್ ಕಾನೂನು ವ್ಯವಸ್ಥೆ 'ಇಂಡಿಯನ್ ಪೋಲೀಸ್ ಆ್ಯಕ್ಟ್'ನ ರೂಪದಲ್ಲಿ ಭಾರತೀಯರನ್ನು ಮನಬಂದಂತೆ ಬಂಧಿಸುವುದು, ಲಾಠೀ ಪ್ರಹಾರ ನಡೆಸುವುದು ಮತ್ತು ಕಾನೂನಿನ ಹೆಸರಲ್ಲಿ ಅಸಹಾಯಕ ಭಾರತೀಯರ ಮೇಲೆ ದೌರ್ಜನ್ಯವೆಸಗುವುದು ಅವಿರತವಾಗಿ ನಡೆದಿತ್ತು. ಉತ್ತರ ಭಾರತದ ಲಾಹೊರ್ ನಲ್ಲಿ ತಮ್ಮ ಕ್ರಾಂತಿಕಾರಿ ಚಟುವಟಿಕೆಗಳಿಂದ ಅದಾಗಲೇ ಬ್ರಿಟಿಷರಿಗೆ ನುಂಗಲಾರದ ತುತ್ತಾಗಿದ್ದ ಲಾಲಾ ಲಜಪತ್ ರಾಯ್ ರವರೂ ಭಗತ್ ಮೇಲೆ ಪರಿಣಾಮ ಬೀರಿದ್ದರು. 1928ರಲ್ಲಿ ಭಾರತದಲ್ಲಿನ ಬ್ರಿಟಿಷ್ ಕಾನೂನು 'ಸೈಮನ್ ಕಮಿಷನ್' ಜಾರಿ ಮಾಡಿತು. ಎಲ್ಲಾ ಭಾರತದ ಮುಖ್ಯ ನಾಯಕರೂ ಇದನ್ನು ವಿರೋಧಿಸಿದರು. ಅದೊಂದು ದಿನ ಲಾಹೋರಿನಲ್ಲಿ ಇದನ್ನು ಪ್ರತಿಭಟಿಸಿ ಲಾಲಾ ಲಜಪತ್ ರಾಯ್ ಶಾಂತಿಯುತ ಮೆರವಣಿಗೆಯಲ್ಲಿ ಸಾಗುತ್ತಿದ್ದರು. ಆದರೆ ಯಾವುದೇ ಕಾರಣವಿಲ್ಲದೆ ಬ್ರಿಟಿಷ್ ಪೋಲಿಸ್ ನ ಅಧಿಕಾರಿ 'ಸಾಂಡರ್ಸ್'ನ ಆದೇಶದ ಮೇಲೆ ಒಂದೇ ಸಮನೆ ಲಾಲಾಜೀಯವರ ಮೇಲೆ ಲಾಠೀ ಪ್ರಹಾರ ನಡೆಸಿದಾಗ ಅವರು ತೀವ್ರವಾಗಿ ಗಾಯಗೊಂಡರು. ತಲೆಗೆ ಬಿದ್ದ ಏಟುಗಳಿಂದ ಒಂದೇ ಸಮನೆ ರಕ್ತ ಹರಿಯಲಾರಂಭಿಸಿತು! ಕೂಡಲೇ ಅವರನ್ನು ಚಿಕಿತ್ಸೆಗಾಗಿ ಕರೆದೊಯ್ಯಲಾಗಿದ್ದರೂ ಲಾಲಾ ಲಜಪತ ರಾಯ್ ಕೊನೆಯುಸಿರೆಳೆದರು.*

*ಶಾಂತವಾಗಿಯೇ ಪ್ರತಿಭಟಿಸಿದರೂ ಬೆಲೆ ನೀಡದೆ ಲಾಲಾಜೀಯವರನ್ನು ಬಲಿ ತೆಗೆದುಕೊಂಡ ಬ್ರಿಟಿಷರ ಪಾಶವೀ ಕೃತ್ಯವನ್ನೂ ಅದಕ್ಕೆ ಕಾರಣನಾದ ಸ್ಯಾಂಡರ್ಸ್ ನ ವರ್ತನೆಯನ್ನು ಭಗತ್ ವಿರೋಧಿಸಿದ. ಎಲ್ಲಕ್ಕಿಂತಾ ಮುಖ್ಯವಾಗಿ ಭಾರತೀಯರ ಮೇಲೆ ಅವರ ಪೋಲೀಸರು ಮನಬಂದಂತೆ ಲಾಠೀ ಪ್ರಹಾರ ನಡೆಸಿದರೂ (ರೈಟ್ ಟು ಡಿಫೆನ್ಸ್ ನ ಹೆಸರಲ್ಲಿ) ತಮ್ಮನ್ನು ರಕ್ಷಿಸಿಕೊಳ್ಳಲು ಯಾವ ಉಪಾಯವೂ ಇಲ್ಲದೆ ಭಾರತೀಯರನ್ನು ಅಸಹಾಯಕರನ್ನಾಗಿ ಮಾಡಿದ್ದ

ಬ್ರಿಟಿಷ್ ಕಾನೂನಿನ ಮೇಲೆ ಅವನ ಆಕ್ರೋಷ ಹೆಚ್ಚತೊಡಗಿತು. ವಿಷಯ ಕೋರ್ಟಿನಲ್ಲಿ ವಿಚಾರಣೆ ನಡೆದಾಗ ಭಗತ್ ಸಿಂಗ್ ಸ್ಯಾಂಡರ್ಸ್ ನ ಕೃತ್ಯವನ್ನು ವಿರೋಧಿಸಿದ. ಅವನ ವಾದವು 'ಲಾಠೀ ಪ್ರಹಾರದಲ್ಲಿ ತಲೆಯ ಮೇಲೆ ಹೊಡೆಯುವುದು ಕಾನೂನಿಗೆ ವಿರುದ್ಧವೆಂದೂ, ಲಾಲಾಜೀಯವರನ್ನು ಕೊಲ್ಲಲೆಂದೇ ಈ ಕೃತ್ಯ ಸ್ಯಾಂಡರ್ಸ್ ನಡೆಸಿದನೆಂದೂ' ಆಗಿತ್ತು. ಆದರೆ ನ್ಯಾಯಾಲಯವು ಸ್ಯಾಂಡರ್ಸ್ ನ ವರ್ತನೆಯನ್ನೇ ಅನುಮೋದಿಸಿ ಸ್ಯಾಂಡರ್ಸ್ ನಿರ್ದೋಷಿಯೆಂದು ಘೋಷಿಸಿತು.*

*ಲಾಲಾಜಿಯವರ ಮರಣ, ಬ್ರಿಟಿಷ್ ಕಾನೂನು ಅವನ ಸಹನೆಯನ್ನು ಕೆರಳಿಸಿತು, ಸ್ಯಾಂಡರ್ಸ್ ನ ಮೇಲೆ ಪ್ರತೀಕಾರದ ಅಗ್ನಿ ಪ್ರಖರವಾಯಿತು! ಸುಖದೇವ್, ರಾಜಗುರು, ಆಜಾದ್ ರ ಒಡಗೂಡಿ ಸೇಡಿನ ಜಾಲವನ್ನು ರೂಪಿಸಿದ. ಅದೇ ಸ್ಯಾಂಡರ್ಸ್ ನ ಕೊಲೆಯ ಸಂಚು! ಆ ಮೂಲಕ ಬ್ರಿಟಿಷ್ ಸೇನೆಯ ಮೇಲೆ ಪ್ರತೀಕಾರ....! 17 ಡಿಸೆಂಬರ್ 1928 ಲಾಹೋರ್ ಪೋಲೀಸ್ ಮುಖ್ಯ ಕಛೇರಿ. ಭಗತನೊಂದಿಗೆ ರಾಜಗುರು ಹೊರಗೆ ಕಾದಿದ್ದು ಸ್ಯಾಂಡರ್ಸ್ ಹೊರ ಬರುತ್ತಲೇ ಬಂದೂಕಿನಿಂದ ಗುಂಡು ಹಾರಿಸಿ ಅವನನ್ನು ಸ್ಥಳದಲ್ಲೇ ಕೊಂದು ಕೂಡಲೇ ಅಲ್ಲಿಂದ ತಪ್ಪಿಸಿಕೊಂಡು ಹೊರಟರು. ತನ್ನ ವೇಷ ಬದಲಿಸಿಕೊಂಡ ಭಗತ್ ರಾಜಗುರುವಿನೊಂದಿಗೆ ತನ್ನ ಮತ್ತೊಬ್ಬ ಕ್ರಾಂತಿಕಾರಿ ಸ್ನೇಹಿತ ಚರಣ್ ಮತ್ತವನ ಪತ್ನಿಯ ಸಹಾಯದಿಂದ ರೈಲಿನಲ್ಲಿ ಲಾಹೋರಿನಿಂದ ಮೊದಲು ಲಖ್ನೌ ನಂತರ ಹೌರಾ ತಲುಪಿದನು. ಸ್ಯಾಂಡರ್ಸ್ ನ ಕೊಲೆಯ ಬಗ್ಗೆ ಭಗತ್ ಗಾಗಲೀ ಸುಖದೇವ ರಾಜಗುರುವಿಗಾಗಲೀ ಯಾವುದೇ ಹೆದರಿಕೆಯಿರಲಿಲ್ಲ. ಭಗತ್ ತಪ್ಪಿಸಿಕೊಳ್ಳಲು ಕಾರಣ, ಈಗಲೇ ಸೆರೆ ಸಿಕ್ಕರೆ ಭಗತ್ ನ ಕೆಲಸ ಮುಗಿಯುವುದಿಲ್ಲ ಅಷ್ಟೇ ಅಲ್ಲದೇ ಬ್ರಿಟಿಷರಿಗೆ ತಕ್ಕ ಪಾಠ ಕಲಿಸುವುದಿನ್ನೂ ಬಾಕಿಯಿತ್ತು.*

*ಸ್ವಾತಂತ್ರ ಹೋರಾಟದ ಕಿಡಿಯು ತನ್ನ ವ್ಯಾಪ್ತಿಯನ್ನು ದೇಶದೆಲ್ಲೆಡೆ ಹರಡಿತು. ಎಲ್ಲೆಡೆಯಲ್ಲೂ ಭಗತ್ ಸಿಂಗ್ ನ ಗುಣಗಾನ, ಅವನ ಧೈರ್ಯವನ್ನು ಮೆಚ್ಚಿದವರು ಎಲ್ಲಾ ಹೋರಾಟಗಾರರು. ಅವನೀಗ ದೇಶದ ಯುವಶಕ್ತಿಯ ನೆಚ್ಚಿನ ಯುವನಾಯಕನ ಪ್ರತಿರೂಪ ಪಡೆದ. 8 ಏಪ್ರಿಲ್ 1929ರಂದು 'ಸೆಂಟ್ರಲ್ ಲೆಜಿಸ್ಲೇಟಿವ್ ಅಸೆಂಬ್ಲಿಯ' ಪ್ರವಾಸಿಗರು ಕುಳಿತಿದ್ದ ಸ್ಥಳದಲ್ಲಿದ್ದ ಭಗತ್ ಮತ್ತವನ ಸಹಚರ ಅಸೆಂಬ್ಲಿ ಹಾಲ್ ನಲ್ಲಿ ಪೂರ್ವಯೋಜಿತದಂತೆ ಸರಿಯಾದ ಸಮಯಕ್ಕೆ ಬಾಂಬ್ ಸ್ಫೋಟಿಸಿದರು. ಸ್ಫೋಟದಿಂದ ಯಾವ ಸಾವು ನೋವುಗಳಾಗಲಿಲ್ಲ, ಒಂದಿಬ್ಬರು ಗಾಯಗೊಂಡರಷ್ಟೇ! ಏಕೆಂದರೆ ಇದರ ಉದ್ದೇಶ ಬ್ರಿಟಿಷ್ ಆಳ್ವಿಕೆ, ಕಾನೂನು ಮತ್ತು ಭಾರತದಲ್ಲಿನ ಸಾಮಾಜಿಕ-ರಾಜಕೀಯ ವ್ಯವಸ್ಥೆಗಳ ಕುರಿತು ಪ್ರತಿರೋಧವೇ ಹೊರತು ಯಾರಿಗೂ ಹಾನಿಯುಂಟುಮಾಡುವುದಲ್ಲ. ಅಸೆಂಬ್ಲಿಯ ತುಂಬ "ಇನ್ ಕ್ವಿಲಾಬ್ ಜಿಂದಾಬಾದ್" ಎಂಬ ಘೋಷಣೆ! ಈ ಬಾರಿ ತನ್ನನ್ನು ಬ್ರಿಟಿಷರು ಬಂಧಿಸಿದಾಗ ಯಾವುದೇ ಪ್ರತಿರೋಧವನ್ನೂ ವ್ಯಕ್ತಪಡಿಸಲೂ ಇಲ್ಲ, ಅಲ್ಲಿಂದ ತಪ್ಪಿಸಿಕೊಳ್ಳುವ ಪ್ರಯತ್ನವನ್ನೂ ಮಾಡಲಿಲ್ಲ! ಅವನನ್ನು ಬ್ರಿಟಿಷರು ಬಂಧಿಸಿ ಜೈಲಿನಲ್ಲಿರಿಸಿದರು.*

*ಭಗತ್ ಮತ್ತವನ ಸಹಚರರು ಈಗ ಸ್ವಾತಂತ್ರ್ಯ ಸಂಗ್ರಾಮದ ಹೊಸ ಸಂಕೇತ.....ಎಲ್ಲರ ಸ್ಫೂರ್ತಿ! ಅವನ ಧೈರ್ಯ, ಸಮಯಪ್ರಜ್ಞೆ ಶತಮಾನದ ಗುಲಾಮಗಿರಿಯಿಂದ ಬೇಸತ್ತಿದ್ದ ಭಾರತೀಯರಿಗೆ ಹೊಸ ಹಾದಿಯಾಯಿತು. ಆದರೆ ಗಾಂಧೀಜಿಯವರು ಭಗತ್ ನಿಂದಾದ ಸ್ಯಾಂಡರ್ಸ್ ಕೊಲೆಯನ್ನು ಅನ್ಯಾಯವೆಂದು ವಿರೋಧಿಸಿದರು. ಪಂಡಿತ್ ನೆಹರೂ ಸಹ ಇದೇ ಅಭಿಪ್ರಾಯವನ್ನು ಅನುಮೋದಿಸಿದರು. ಸ್ವತಂತ್ರ ಹೋರಾಟದಲ್ಲಿ ತಮ್ಮನ್ನು ಕ್ರಾಂತಿಕಾರಕರೆಂದು ಅನುಮೋದಿಸದ ಗಾಂಧೀಜಿಯವರಿಗೆ ಸುಖದೇವ ಒಂದು ಪತ್ರವನ್ನೂ ಬರೆದು ತನ್ನ

ಹತಾಶೆಯನ್ನು ವ್ಯಕ್ತಪಡಿಸಿದನು.*

*ಬಂಧನದಲ್ಲಿದ್ದ ಭಗತ್ ಮತ್ತವನ ಸಂಗಡಿಗ ಬಟುಕೇಶ್ವರ ದತ್ತರ ವಿಚಾರಣೆ 7 ಮೇ, 1929ರಂದು ಆರಂಭವಾಯ್ತು. ಭಗತ್ ತನ್ನ ಪರವಾಗಿ ತಾನೇ ವಾದಿಸಲು ನಿರ್ಧರಿಸಿದ. ಅವನ ವಾದ, ವಿಚಾರಗಳ ಸರಣಿ ಎಲ್ಲರನ್ನೂ ನಿಬ್ಬೆರಗಾಗಿಸಿತು! ದೇಶದೆಲ್ಲೆಡೆ ಅವನ ಬಂಧನಕ್ಕೆ ಭಾರತೀಯರಿಂದ ವಿರೋಧ ವ್ಯಕ್ತವಾಗತೊಡಗಿತು. ಅದೇ ಸಮಯದಲ್ಲಿ ತನ್ನ ಸಂಘಟನೆಯ ಸಹಚರರನ್ನೂ ಲಾಹೋರಿನಲ್ಲಿ ಬಂಧಿಸಲಾಯಿತು! ಭಗತ್ ಮತ್ತವನ ಸಹಚರರ ಮೇಲೆ ಸ್ಯಾಂಡರ್ಸ್ ಕೊಲೆ ಮತ್ತು ಲಾಹೋರ್ ಕಾನೂನು ವಿರೋಧಿ ಕಾರ್ಯಾಚರಣೆಯ ಆಪಾದನೆ ಹೇರಲಾಯಿತು! ಆದರೆ ಭಗತ್ ಸಿಂಗ್ ಅಸಾಮಾನ್ಯ ಮನೋಬಲವನ್ನು ಹೊಂದಿದ್ದ ಧೀರ! ಸೆರೆಯಲ್ಲಿದ್ದರೂ ಅವನದು ಎಡೆಬಿಡದ ಕ್ರಾಂತಿ, ಅವನ ವಿಚಾರ ವೈಖರಿ, ಅಪಾರ ಜ್ಞಾನವೆಲ್ಲವೂ ಅಭಿವ್ಯಕ್ತವಾದವು....ಜೈಲಿನಲ್ಲಿ ಆಹಾರ ಸೇವಿಸಲು ನಿರಾಕರಿಸಿದಾಗ ಬಲವಂತವಾಗಿ ಪೈಪುಗಳ ಮೂಲಕ ಆಹಾರವನ್ನು ತುರುಕುವ ಪ್ರಯತ್ನ ನಡೆಯಿತು, ಕುಡಿಯಲು ನೀರನ್ನೂ ಕೊಡದೆ ನಾನಾ ತರಹದ ಹಿಂಸೆಗಳನ್ನು ನೀಡಲಾಯ್ತು!*

*ಸೆರೆಯಲ್ಲಿದ್ದ ಭಾರತೀಯ ಕೈದಿಗಳನ್ನು ಅಮಾನುಷವಾಗಿ ಬ್ರಿಟಿಷರು ನಡೆಸಿಕೊಳ್ಳುತ್ತಿದ್ದ ರೀತಿಯನ್ನೂ ಕಂಡು ಕ್ರೋಧಗೊಂಡ ಅವನು ಅಲ್ಲಿಯೂ ಅದನ್ನು ತಪ್ಪೆಂದು ಸಮರ್ಥಿಸಿದ. ಅಲ್ಲಿನ ಅವನ ದಿನಚರಿಯಲ್ಲಿ ಸತತವಾಗಿ ಚಿಂತನೆ ಮತ್ತು ಬರಹಗಳು ಪ್ರಮುಖವಾದವು. ಭಾರತದಲ್ಲದೇ ವಿದೇಶದಲ್ಲೂ ಭಗತ್ ಸಿಂಗ್ ಕುರಿತು ಉತ್ತಮ ಪ್ರತಿಕ್ರಿಯೆಗಳು ವ್ಯಕ್ತವಾಗಿದ್ದವು! ಅನೇಕ ಪ್ರಸಿದ್ಧ ವ್ಯಕ್ತಿಗಳು ಅವನನ್ನು ನೋಡಲು ಭೇಟಿಯಿತ್ತರು, ಸೆರೆಮನೆಯಲ್ಲಿಯೇ ಅವನನ್ನು ಪತ್ರಕರ್ತರು ಸಂಪರ್ಕಿಸಿ ಸಮಾಲೋಚನೆಯನ್ನೂ ನಡೆಸುತ್ತಿದ್ದರು.*

*ಅನೇಕ ದಿನಗಳ ವಿಚಾರಣೆಗಳ ನಂತರ ಭಗತ್ ನ ವಾದಗಳೆಲ್ಲವೂ ತಿರಸ್ಕೃತಗೊಂಡವು. ಭಗತ್ ಸಿಂಗ್, ರಾಜ್ ಗುರು ಮತ್ತು ಸುಖದೇವ್ ಅವರನ್ನು 23 ಮಾರ್ಚ್ 1931ರಂದು ನೇಣುಕಂಬಕ್ಕೇರಿಸಬೇಕೆಂದು ನ್ಯಾಯಾಲಯ ತೀರ್ಪು ನೀಡಿತು.*

*ಭಗತ್ ಸಿಂಗ್ ದೇಶಕ್ಕೆ ನೀಡಿರುವ ಸಂದೇಶ:*

*“ಎಲ್ಲವೂ ಸುಟ್ಟು ಭಸ್ಮವಾದರೂ, ಭಸ್ಮದ ಕಣಕಣಗಳು ನನ್ನ ಜ್ವಾಲೆಯಿಂದ ಜಾಗೃತವಾಗುವವು.. ಸೆರೆಯಲ್ಲಿದ್ದರೂ ನನ್ನ ಧ್ಯೇಯಕ್ಕಾಗಿ ಎಂದಿಗೂ ನಾನು ಬಂಧಮುಕ್ತ...”*

*ಕ್ರಾಂತಿಯ ಕೋರಿಕೆಯು ಅಂತರಾತ್ಮದ ನಿಲುವಾಗಬೇಕು! ಮಾನವೀಯತೆಯ ದ್ಯೋತಕವೂ ಆಗಬೇಕು ಇದು ಅವಿನಾಶೀ ಭಾವವಾಗಬೇಕು!*

*“ಬ್ರಿಟಿಷರ ವಿರುದ್ಧ ನಡೆಸಿರುವ ಯಾವ ಕೃತ್ಯವನ್ನೂ ಕುರಿತು ನಾನು ಪಶ್ಚಾತ್ತಾಪ ಪಡುವುದಿಲ್ಲ, ಮುಂದಿನ 15 ವರ್ಷಗಳಲ್ಲಿ ಭಾರತ ಬ್ರಿಟಿಷರ ದಾಸ್ಯದಿಂದ ಮುಕ್ತವಾಗುತ್ತದೆ. ಆದರೆ ದೇಶದ ಅಭಿವೃದ್ಧಿಗಾಗಿ ಮೊದಲು ಆಗಬೇಕಾದ ಮುಖ್ಯ ಕೃತ್ಯವೇನೆಂದರೆ ಬ್ರಿಟಿಷರು ಸ್ವಾರ್ಥದಿಂದ ಹಿಂದೂಸ್ಥಾನದ ಮೇಲೆ ಹೇರಿರುವ ಕಾನೂನು ವ್ಯವಸ್ಥೆ, ಕಾಯಿದೆಗಳನ್ನು ಸ್ವಾತಂತ್ರ್ಯ ಬರುವ ಮೊದಲು ಸಂಪೂರ್ಣವಾಗಿ ತಿರಸ್ಕರಿಸಿ!”*

*ತನ್ನ ಮಣ್ಣು, ಭೂಮಿ, ಗಂಧ-ಗಾಳಿಯನ್ನು ಪ್ರೀತಿಸುತಿದ್ದ, ಭಾರತದ ಧ್ವಜವು ಉತ್ತುಂಗಕ್ಕೇರುವುದರ ಕನಸನ್ನೇ ಎಲ್ಲರಿಗಿತ್ತ ಭಗತ್, ರಾಜಗುರು, ಸುಖದೇವ್ ಅವರನ್ನು

ಗಲ್ಲಿಗೇರಿಸಲು ನೀಡಿದ ಬ್ರಿಟಿಷ್ ಕಾನೂನನ್ನು ಪ್ರತಿಭಟಿಸಲು ಯಾವ ಧೀಮಂತ ನಾಯಕರೂ ಮುಂದೆ ಬರಲಿಲ್ಲ! ಅದು ಈ ದೇಶದ ಮಟ್ಟಿಗೆ ದೌರ್ಭಾಗ್ಯವೇ ಸರಿ. ಅಸಹಾಯಕರಾಗಿ ನೋಡುವುದಷ್ಟೇ ಭಾರತೀಯರ ಕೆಲಸವಾಗಿತ್ತು!*

*ಮೇರಾ ರಂಗ್ ದೇ ಬಸಂತೀ ಚೋಲಾ... ಮೇರಾ ರಂಗ್ ದೇ........*

*ಭಾರತವೆಂಬ ಈ ಪುಣ್ಯಭೂಮಿಯಲ್ಲಿ ಜನ್ಮ ತಳೆದು ಬಣ್ಣಗಳನ್ನೆರಚಿ,*

*ದುಷ್ಟರಾಳ್ವಿಕೆಯ ದಾಸ್ಯದ ಪ್ರಹಾರಗಳಿಂದ ಘಾಸಿತಗೊಂಡು,*

*ಅಜ್ಞಾನವೆಂಬ ಕಪ್ಪು ಕತ್ತಲೆಯಲ್ಲಿ ದೇಶ ನಿದ್ರಿಸುತ್ತಿದ್ದಾಗ.....*

*ಸೋಲಿಲ್ಲದ ಸರದಾರರಾಗಿ ಹೋರಾಡಿ ಭಾರತಾಂಬೆಯ ಮಡಿಲಲ್ಲಿ ತಮ್ಮ ಬದುಕನ್ನೇ ಅರ್ಪಿಸಿದ ಭಗತ್, ಸುಖದೇವ ರಾಜಗುರು ಬಲಿದಾನಿಗಳಾಗಿ ಉರಿಸಿಟ್ಟ ಕ್ರಾಂತಿಯಿನ್ನೂ ಹಸಿರಾಗಿದೆ....*

✍ *ಮಾಹಿತಿ ವೇದಿಕೆ*?

*ಪ್ರಪಂಚದ ಮೊಟ್ಟ ಮೊದಲ ವಿಮಾನ ತಯಾರಿಸಿದವರು ಯಾರು? ಅವರ ಬಗ್ಗೆ ಕಿರು ಮಾಹಿತಿ ನೊಡೋಣ ಬನ್ನಿ*

*ವ್ರೈಟ್ ಸಹೋದರರು*✍

*ವ್ರೈಟ್ ಸಹೋದರರು, ಒರ್ವಿಲ್ಲೆ (ಜನನ: ಆಗಸ್ಟ್ ೧೯, ೧೮೭೧ – ಮರಣ: ಮೇ ೩೦, ೧೯೧೨ ) ಹಾಗು ವಿಲ್ಬರ್(ಜನನ: ಏಪ್ರಿಲ್ ೧೬, ೧೮೬೭ – ಮರಣ:ಮೇ ೩೦, ೧೯೧೨ ) ಅಮೇರಿಕಾರಾಷ್ಟ್ರೀಯರು. ವ್ರೈಟ್ ಸಹೋದರರು ಪ್ರಪಂಚದ ಮೊಟ್ಟ ಮೊದಲನೆಯ ವಿಮಾನ ತಯಾರಕರು ಹಾಗು ಪ್ರಪಂಚದ ಮೊಟ್ಟ ಮೊದಲನೆಯ ಸಫಲ ಯಾತ್ರಿಗಳಸಹಿತ ಡಿಸೆಂಬರ್ ೧೭, ೧೯೦೩ ರಂದುವಿಮಾನ ಚಾಲನೆ ಮಾಡಿದವರು.*

*1 ಒರ್ವಿಲ್ಲೆ ವ್ರೈಟ್*

*Bornಆಗಸ್ಟ್ 19, 1871*

*Died ಜನವರಿ 30, 1948(aged 76*

*Occupation*

*ಮುದ್ರಣಕಾರ/ಮುದ್ರಕ, ಬೈಸಿಕಲ್ಲು ತಯಾರಕ/ಮಾರಾಟಗಾರ, ವಿಮಾನ ಶೋಧಕ/ತಯಾರಕ, ವಿಮಾನ ಚಾಲಕ / ತರಬೇತಿಕಾರ.*

## *2 ವಿಲ್ಬರ್ ವ್ರೈಟ್*

*Born   ಏಪ್ರಿಲ್ 16, 1867*

*Died ಮೇ 30, 1912 (aged 45*

*Occupation*

*ಮುದ್ರಣಕಾರ, ಬೈಸಿಕಲ್ಲು ತಯಾರಕ/ಮಾರಾಟಗಾರ, ವಿಮಾನ ಶೋಧಕ/ತಯಾರಕ, ವಿಮಾನ ಚಾಲಕ / ತರಬೇತಿಕಾರ.*

*ಬಾಲ್ಯ*

*ವ್ರೈಟ್ ಸಹೋದರರು ಮಿಲ್ಟೋನ್ ವ್ರೈಟ್ ಹಾಗು ಸುಸಾನ್ ಕ್ಯಾಥೆರಿನ್ ಕೋರ್ನೆರವರ ೭ ಮಕ್ಕಳಲ್ಲಿ ಇಬ್ಬರಾಗಿ ಜನಿಸಿದರು. ವಿಲ್ಬರ್ ಮಿಲ್ವಿಲ್ಲೇ, ಇಂಡಿಯಾನದಲ್ಲಿ ಹಾಗು ಒರ್ವಿಲ್ಲೆ ಡೆಯ್ಟೋನಾ, ಓಹಿಯೊದಲ್ಲಿ ಜನಿಸಿದರು. ಪ್ರಾಥಮಿಕ ವ್ಯಾಸಂಗದ ಸಮಯದಲ್ಲಿ ಒರ್ವಿಲ್ಲೆ ತುಂಬಾ ತುಂಟನಾಗಿದ್ದು ಒಮ್ಮೆ ಶಾಲೆಯಿಂದ ಹೊರಗೆ ಕಳಿಸಲಾಗಿತು. ೧೮೭೮ರಲ್ಲಿ ಅವರ ತಂದೆ ಚರ ್ಚಿನ ಹಿರಿಯ ಅರ ್ಚಕರಾಗಿದ್ದು, ಬಹಳ ತಿರುಗಾಟದಲ್ಲಿರುತಿದ್ದರು. ಅದೇ ಸಮಯದಲ್ಲಿ ಒಮ್ಮೆ ಅವರು ತನ್ನ ಹಿರಿಯ ಮಕ್ಕಳಿಗಾಗಿ ಒಂದು ಆಟಿಕೆಯ ಹೆಲಿಕಾಪ್ಟರ್ ತಂದಿದ್ದರು. ವಿಲ್ಬರ್ ಹಾಗು ಒರ್ವಿಲ್ಲೆ ಆ ಆಟಿಕೆ ಮುರಿಯುವ ತನಕ ಅದರಲ್ಲಿ ಆದಿದ್ದರು ಹಾಗು ನಂತರದ ದಿನಗಳಲ್ಲಿ ಅದೇ ರೀತಿಯ ಹೆಲಿಕಾಪ್ಟರ್ ತಯಾರಿಸುವಲ್ಲಿ ಸಫಲರಾಗಿದ್ದರು. ಇದೇ ಅನುಭವ ಅವರಲ್ಲಿ ವೈಮಾನಿಕ ಹಾರಾಟದತ್ತ ಆಸಕ್ತಿ ಹುಟ್ಟಿಸಿತು*

### *ಮೊದಲ ವೃತ್ತಿಜೀವನ ಹಾಗು ಸಂಶೋಧನೆ*✍

*ಕುಟುಂಬವು ೧೮೮೪ರ ಸುಮಾರಿಗೆ ಅಚಾನಕ್ಕಗಿ ರಿಚ್ಮಂಡ್, ಇಂಡಿಯಾನದಿಂದ ಡೆಯ್ತೊನಾಕ್ಕೆ ವಲಸೆ ಹೊದ್ದರಿಂದಾಗಿ ಸಹೊದರರಿಗೆ ತಮ್ಮ ಹೈಸ್ಕೂಲ್ ವ್ಯಾಸಾಂಗ ಪೂರೈಸಲಾಗಲಿಲ್ಲ. ೧೮೯೨ರ ಸುಮಾರಿಗೆ ಹೊಸ ರೀತಿಯ ಬೈಸಿಕಲ್ (ಸಮಾನ ಗಾತ್ರ ಹಾಗು ಆಕಾರದ ಚಕ್ರ ಹೊಂದಿದ) ದುರಸ್ತಿ ಹಾಗೂ ಮಾರಾಟದ ಅಂಗಡಿಯನ್ನು ಹೊಂದಿ ಅದಕ್ಕೆ ವ್ರೈಟ್ ಸೈಕಲ್ ಎಕ್ಸ್ ಚೆಂಜ್ ಎಂದು ಹೆಸರಿಟ್ಟರು ಹಾಗು ಮುಂದೆ ಅದಕ್ಕೆ ವ್ರೈಟ್ ಸೈಕಲ್ ಕಂಪೆನಿ ಎಂದು ಬದಲಾಯಿಸಿ ೧೮೯೬ರ ಸುಮಾರಿಗೆ ತಮ್ಮದೆ ಆದ ಛಾಪಿನ ಸೈಕಲ್ ತಯಾರಿಸಲು ಪ್ರಾರಂಬಿಸಿದರು*

*ಮಾಹಿತಿ ವೇದಿಕೆ*?

*ಭಾರತ ಏಕೀಕರಣದ ರೂವಾರಿ ಸರ್ದಾರ್ ಪಟೇಲ್*✍

*ಇಂದು ಸರ್ದಾರ್ ವಲ್ಲಭಭಾಯ್ ಪಟೇಲ್ ರ ಜಯಂತಿ ಅವರ ಬಗ್ಗೆ ಕಿರು ಮಾಹಿತಿ*✍

*ಅಸಾಧಾರಣ ಸಂಘಟಕ,  ಜನನಾಯಕರಾಗಿದ್ದ ಪಟೇಲರು ಏಕೀಕೃತ ಭಾರತವನ್ನು ಕಟ್ಟುವಲ್ಲಿ ಅಮೂಲ್ಯ ಕೊಡುಗೆಯಿತ್ತ ಧೀಮಂತ. ಅಖಂಡ ಭಾರತಕ್ಕೆ ಸಂಬಂಧಿಸಿ ಅವರಿಗಿದ್ದ ದೂರದೃಷ್ಟಿಯೇ, ಅಖಿಲ ಭಾರತ ಆಡಳಿತಾತ್ಮಕ ಸೇವೆಗಳ ಹುಟ್ಟಿಗೂ ಕಾರಣವಾಯಿತು. ಇದನ್ನು ಪ್ರತಿಯೊಬ್ಬ ಭಾರತೀಯನೂ ನೆನಪಿನಲ್ಲಿಟ್ಟುಕೊಳ್ಳಬೇಕು.*

*ತನ್ನ ಭವಿಷ್ಯ ಉಜ್ವಲವಾಗಲು ಉತ್ತಮ ತಳಹದಿಯನ್ನು ಹಾಕಿಕೊಟ್ಟಂಥ ಧೀಮಂತರನ್ನು ಅಥವಾ ದಂತಕತೆಯೇ ಆಗಿಬಿಟ್ಟಿರುವ ವ್ಯಕ್ತಿತ್ವಗಳನ್ನು ಯಾವ ದೇಶವೂ ನಿರ್ಲಕ್ಷಿಸಲಾಗದು. ಏಕನಿಷ್ಠ ಸಮರ್ಪಣಾ ಮನೋಭಾವದೊಂದಿಗೆ, ದೂರಗಾಮಿ ಮತ್ತು ಪರಿಣಾಮಕಾರಿ ಚಿಂತನೆಯೊಂದಿಗೆ ಭಾರತದ ಉಜ್ವಲ ಭವಿಷ್ಯಕ್ಕೆ ಹೀಗೆ ಅಡಿಪಾಯ ಹಾಕಿದ ಆದರ್ಶ ನಾಯಕರಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲರು ಕೂಡ ಒಬ್ಬರು. ದೇಶಕ್ಕೆ ಸ್ವಾತಂತ್ರ್ಯ ಸಿಗುತ್ತಿದ್ದಂತೆ, ಸೇನಾ ಕಮಾಂಡರ್‌ಗಿರುವ ಚುರುಕುತನ ಹಾಗೂ ದೂರದೃಷ್ಟಿಯ ನಾಯಕನಿಗಿರುವ ಕಾರ್ಯಕೌಶಲದೊಂದಿಗೆ ದೇಶದ ರಾಜಕೀಯ ಏಕೀಕರಣ, ಸುಸಂಘಟನೆಯವನ್ನು ವಿನ್ಯಾಸಗೊಳಿಸಿದ್ದು ಅವರೇ.*

*ದೇಶವು ವಿಭಜನೆಯಾದದ್ದನ್ನು ಅನುಸರಿಸಿ, ಮತ್ತಷ್ಟು ಪ್ರಾಂತಗಳು ಒಡೆದು ಚೂರಾಗುವುದನ್ನು ತಡೆಯುವಲ್ಲಿ ಹಾಗೂ 560ಕ್ಕೂ ಹೆಚ್ಚಿದ್ದ ರಾಜಪ್ರಭುತ್ವದ ಸಂಸ್ಥಾನಗಳನ್ನು ಭಾರತ ಒಕ್ಕೂಟದೊಂದಿಗೆ ವಿಲೀನಗೊಳಿಸುವಲ್ಲಿ ಪಟೇಲರು ತೋರಿದ ದೂರದೃಷ್ಟಿ, ಔಚಿತ್ಯಪ್ರಜ್ಞೆ, ಕಾರ್ಯಕೌಶಲ, ರಾಜತಾಂತ್ರಿಕತೆಗೆ ವರ್ತಮಾನದ ಭಾರತ ಚಿರಋಣಿಯಾಗಿರಬೇಕು. ಎಲ್ಲಕ್ಕಿಂತ ಮಿಗಿಲಾಗಿ, ಯಾವುದೇ ರಕ್ತಪಾತವಿಲ್ಲದೆಯೇ ಈ ಮಹತ್ಸಾಧನೆ ನೆರವೇರಿತು ಎಂಬುದು ಈ ವಿಸ್ಮಯಕಾರಿ ವಿಲೀನ ಅಥವಾ ಸುಸಂಘಟನೆಯನ್ನು ಅತ್ಯಂತ ಗಮನಾರ್ಹ ಘಟನೆಯನ್ನಾಗಿಸಿದೆ ಎನ್ನಲಡ್ಡಿಯಿಲ್ಲ.*

*ಈ ಮಹತ್ಕಾರ್ಯದ ಸಾಧನೆಗಾಗಿ ಆಯಾ ಪರಿಸ್ಥಿತಿಗೆ ತಕ್ಕಂತೆ ವಿಭಿನ್ನ ಮಾರ್ಗೋಪಾಯಗಳನ್ನು, ಪ್ರಸ್ತಾವ ಮಾರ್ಗಗಳನ್ನು ಅಳವಡಿಸಿಕೊಂಡಿದ್ದು ಪಟೇಲರ ಹೆಗ್ಗಳಿಕೆ; ವಿಲೀನಕ್ಕೆ ಸಂಬಂಧಿಸಿದಂತೆ ಕೆಲವೊಂದು ನಿದರ್ಶನಗಳಲ್ಲಿ ಸ್ನೇಹಪೂರ್ವಕ ಸಲಹೆ ನೀಡಿದ ಅವರು, ಮತ್ತೆ ಕೆಲವು ಸಂದರ್ಭಗಳಲ್ಲಿ ಈ ಆಶಯದ ಹಿಂದಿರುವ ಕಾರಣಗಳನ್ನು ಮನವರಿಕೆ ಮಾಡಿಕೊಳ್ಳುವಂತೆ ಆಯಾ ಪ್ರಾಂತ್ಯಗಳ ಆಳುಗರ ಮನವೊಲಿಸಿದ್ದೂ ಉಂಟು. ಅಷ್ಟೇಕೆ, ಹೈದರಾಬಾದ್ ನಿಜಾಮನ ವಿಷಯದಲ್ಲಿ ಕಂಡುಬಂದಂತೆ ಅನಿವಾರ್ಯ ಸಂದರ್ಭದಲ್ಲಿ ಪಟೇಲರು ಸೇನಾಪಡೆಯನ್ನು ಬಳಸಿದ್ದೂ ಇದೆ. ಇವೆಲ್ಲ ಘಟಿಸಿ ಬಹಳ ವರ್ಷಗಳೇ ಆಗಿವೆ. ಈಗೊಮ್ಮೆ ಸಿಂಹಾವಲೋಕನ ಮಾಡಿದಾಗ, ಭಾರತದೊಂದಿಗೆ ಅಥವಾ ಪಾಕಿಸ್ತಾನದೊಂದಿಗೆ ಸೇರಿಕೊಳ್ಳುವ ಇಲ್ಲವೇ ಸ್ವತಂತ್ರವಾಗೇ ಉಳಿದುಕೊಳ್ಳುವ ಆಯ್ಕೆಯನ್ನು ನಮ್ಮಲ್ಲಿನ ರಾಜಪ್ರಭುತ್ವದ ಸಂಸ್ಥಾನಗಳಿಗೆ

ನೀಡಿದ್ದಂಥ ಸಮಯದಲ್ಲೂ ಪಟೇಲರು ‘ಭಾರತ ಏಕೀಕರಣ’ದಂಥ ಮಹತ್ಸಾಧನೆಯನ್ನು ಛಲಬಿಡದೆ ಸಾಧಿಸಿದರು ಎಂಬುದು ಒಂದು ಮಹತ್ವದ ವಿದ್ಯಮಾನವಾಗಿ ಭಾರತೀಯರ ಮನಸನ್ನು ತಟ್ಟುತ್ತದೆ.*

*ದೇಶಕ್ಕೆ ಸ್ವಾತಂತ್ರ್ಯ ದಕ್ಕುತ್ತಿದ್ದಂತೆ, ತಾನು ಸ್ವತಂತ್ರವಾಗಿಯೇ ಉಳಿದುಕೊಳ್ಳ ಬೇಕೆಂಬ ಮಹತ್ವಾಕಾಂಕ್ಷೆಗೆ ನೀರೆರೆದ ಹೈದರಾಬಾದ್ ನಿಜಾಮ, ಇದರ ಜಾರಿಗೆಂದು ಒಂದು ಫರ್ಮಾನು ಹೊರಡಿಸಿದ. ಅದೇ ವೇಳೆಗೆ, ಆತ ರಜಾಕಾರರ ಮೇಲಿನ ನಿರ್ಬಂಧವನ್ನು ಸಡಿಲಿಸಿ ಸ್ವೇಚ್ಛೆಯಾಗಿ ಬಿಡುವುದರ ಜತೆಗೆ, ಪಾಕಿಸ್ತಾನದೊಂದಿಗೆ ಹೈದರಾಬಾದನ್ನು ವಿಲೀನ ಗೊಳಿಸುವ ಯೋಚನೆಯೊಂದಿಗೆ ಹುಡುಗಾಟವಾಡತೊಡಗಿದ. ಅದೇ ರೀತಿಯಲ್ಲಿ, ತಾನು ಸ್ವತಂತ್ರವಾಗಿ ಉಳಿಯುವುದಾಗಿ ಟ್ರಾವಂಕೋರ್ ಘೋಷಿಸಿಕೊಂಡರೆ, ಪಾಕಿಸ್ತಾನಕ್ಕೆ ಸೇರ್ಪಡೆಗೊಳ್ಳುವುದಾಗಿ ಜುನಾಗಢದ ನವಾಬ ಪ್ರಕಟಿಸಿದ.*

‘ಆಪರೇಷನ್ ಪೋಲೋ’ ಎಂಬ ಸಂಕೇತನಾಮ ಹೊಂದಿದ್ದ ಕ್ಷಿಪ್ರ ಕಾರ್ಯಾಚರಣೆಯ ನೆರವಿನೊಂದಿಗೆ ಜುನಾಗಢವನ್ನು ಕೈವಶ ಮಾಡಿಕೊಂಡ ನಂತರ, ಕೇವಲ ನಾಲ್ಕು ದಿನದೊಳಗಾಗಿ ಹೈದರಾಬಾದ್ ಸಂಸ್ಥಾನವು ಭಾರತದ ಮಿಕ್ಕ ಪ್ರಾಂತ್ಯಗಳೊಂದಿಗೆ ವಿಲೀನಗೊಂಡಿತು. ಹೈದರಾಬಾದನ್ನು ಸ್ವತಂತ್ರವಾಗಿಸಿ ಭಾರತದ ಒಕ್ಕೂಟದೊಂದಿಗೆ ವಿಲೀನಗೊಳಿಸುವುದಕ್ಕೆಂದು ಹಮ್ಮಿಕೊಳ್ಳಲಾಗಿದ್ದ ‘ಪೊಲೀಸ್ ಕಾರ್ಯಾಚರಣೆ’ ಎಂದೇ ಜನಜನಿತವಾಗಿದ್ದ ಕಾರ್ಯಾಚರಣೆಯು 1948ರ ಸೆಪ್ಟೆಂಬರ್ 13ರಂದು ಆರಂಭವಾಗಿ 17ಕ್ಕೆ ಅಂತ್ಯಗೊಂಡಿತು. ಆದ್ದರಿಂದ, ಪ್ರತಿವರ್ಷದ ಸೆಪ್ಟೆಂಬರ್ 17ನ್ನು ಹೈದರಾಬಾದ್‌ನ ಅನೇಕ ವಲಯಗಳಲ್ಲಿ ಹಾಗೂ ಮಹಾರಾಷ್ಟ್ರ ಮತ್ತು ಕರ್ನಾಟಕ ರಾಜ್ಯಗಳ ಕೆಲವೊಂದು ಪ್ರದೇಶಗಳಲ್ಲಿ ‘ಹೈದರಾಬಾದ್ ವಿಮೋಚನಾ ದಿನ’ ಎಂದೇ ಆಚರಿಸಲಾಗುತ್ತಿದೆ; ಈ ಪ್ರದೇಶಗಳು ಹಿಂದಿನ ಹೈದರಾಬಾದ್ ಸಂಸ್ಥಾನದ ಭಾಗಗಳಾಗಿದ್ದವು ಎಂಬುದಿಲ್ಲಿ ಉಲ್ಲೇಖನೀಯ.

ಈ ಎಲ್ಲ ಮಹತ್ವದ ಘಟ್ಟಗಳಲ್ಲಿ ಸರ್ದಾರ್ ಪಟೇಲರ ನಿಜಾರ್ಥದ ಮುತ್ಸದ್ದಿತನ, ಕಾರ್ಯಕೌಶಲ ಹೊಮ್ಮಿದವು ಎನ್ನಬೇಕು. ಆ ಯಾ ಸಂದರ್ಭದಲ್ಲಿ ತಾಂಡವವಾಡುತ್ತಿದ್ದ ಪರಿಸ್ಥಿತಿಯು ನಾಗರಿಕ ದಂಗೆಯ ಸ್ವರೂಪ ತಳೆಯದಂತೆ ನೋಡಿಕೊಳ್ಳುವ ಮೂಲಕ, ಕಿರಿಕಿರಿ ಉಂಟುಮಾಡುತ್ತಿದ್ದ ಪ್ರಾಂತ್ಯಗಳು/ಸಂಸ್ಥಾನಗಳು ಭಾರತ ಒಕ್ಕೂಟಕ್ಕೆ ಸರಾಗವಾಗಿ ಸೇರಿಕೊಳ್ಳುವಂತೆ ಮಾಡಿದ್ದು ಅವರ ಈ ವೈಶಿಷ್ಟ್ಯಗಳೇ. ಅದಮ್ಯ ಉತ್ಸಾಹ ಮತ್ತು ದಣಿವರಿಯದ ದುಡಿಮೆಯೊಂದಿಗೆ ಬಲಿಷ್ಠ ಭಾರತವನ್ನು ಕಟ್ಟುವ ಅವರ ಈ ತಪಸ್ಸಿನಲ್ಲಿ, ರಕ್ತಪಾತಕ್ಕಾಗಲೀ ಯಾವುದೇ ತೆರನಾದ ದಂಗೆಗಾಗಲೀ ಆಸ್ಪದವಿರಲಿಲ್ಲ ಎಂಬುದು ಗಮನಾರ್ಹ.

ತಮ್ಮನ್ನು ಸಂಸ್ಥಾನಗಳ ವಿಭಾಗದ ಉಸ್ತುವಾರಿಯಾಗಿಸಿದ ನಂತರ, ‘ಈ ಸಂಸ್ಥಾನಗಳದ್ದು ಮಾತ್ರವಲ್ಲದೆ ಭಾರತದ ಸುರಕ್ಷತೆ ಮತ್ತು ಸಂರಕ್ಷಣೆಯಾಗಬೇಕೆಂದರೆ, ಒಕ್ಕೂಟದ ವಿಭಿನ್ನ ಭಾಗಗಳ ನಡುವೆ ಪರಸ್ಪರ ಸಹಕಾರ ಮತ್ತು ಏಕತೆಯ ಅಗತ್ಯವಿದೆ... ಏಕೋದ್ದೇಶದ ಸಾಹಸ ಅಥವಾ ಪ್ರಯತ್ನದ ಮೂಲಕ ನಾವು ದೇಶವನ್ನು ಔನ್ನತ್ಯಕ್ಕೆ ಕೊಂಡೊಯ್ಯಲು ಸಾಧ್ಯವಿದೆ. ಆದರೆ ಒಗ್ಗಟ್ಟಿನಲ್ಲಿ ಕೊರತೆಯುಂಟಾದರೆ, ನಾವು ಮತ್ತಷ್ಟು ಹೊಸ ವಿಪತ್ತುಗಳನ್ನು ಎದುರಿಸಬೇಕಾದೀತು’ ಎಂದು ಎಚ್ಚರಿಸುವ ಮೂಲಕ ಪಟೇಲರು ವಿಲೀನದ ಅಗತ್ಯ ಮತ್ತು ಅನಿವಾರ್ಯತೆಗೆ ಒತ್ತುನೀಡಿದರು, ಎಲ್ಲರಿಗೂ ಅದನ್ನು ಮನಗಾಣಿಸಿದರು.

ಸರ್ದಾರ್ ಪಟೇಲರು ಭಾರತ ಕಂಡ ಮಹಾನ್ 'ಏಕೀಕರಣಪಟು' ಎಂಬುದರಲ್ಲಿ ಸಂದೇಹವಿಲ್ಲ. ರಾಷ್ಟ್ರ ನಿರ್ಮಾಣದಲ್ಲಿ ನೀಡಿದ ಅಗಾಧ ಕೊಡುಗೆಯನ್ನು ಪಂ. ಜವಾಹರಲಾಲ್ ನೆಹರು ಅವರು ಕೃತಜ್ಞತಾಪೂರ್ವಕವಾಗಿ ನೆನೆಯುತ್ತ, 'ನವಭಾರತದ ನಿರ್ಮಾತೃ ಹಾಗೂ ಸಂಘಟಕನಾಗಿ ಇತಿಹಾಸವು ಅವರನ್ನು ಸ್ಮರಿಸುತ್ತದೆ' ಎಂದಿದ್ದರು.

ಪ್ರಾಯೋಗಿಕ ಅಥವಾ ವಾಸ್ತವಿಕತೆಯಿಂದ ಕೂಡಿದ ಮನೋಧರ್ಮ ಅವರ ಅತಿದೊಡ್ಡ ಆಸ್ತಿಯಾಗಿತ್ತು. ನಾಯಕತ್ವದ ಕುರಿತಾಗಿ ಗಾಂಧೀಜಿಯವರು ಹೇಳಿದ 'ಬಾಹುಬಲವನ್ನು ಹೊಂದಿರುವುದೇ ನಾಯಕತ್ವ ಎಂಬುದಾಗಿ ನಾನು ಒಂದು ಕಾಲಕ್ಕೆ ಭಾವಿಸಿದ್ದೆ; ಆದರೆ ಜನರೊಂದಿಗೆ ಸಾಮರಸ್ಯದಿಂದಿದ್ದು ತತ್ಫಲವಾಗಿ ಜಯ ಸಾಧಿಸುವುದೇ ನಾಯಕತ್ವ ಎಂಬುದು ನನಗಿಂದು ಅರ್ಥವಾಗಿದೆ' ಎಂಬ ಮಾತಿಗೆ ಪಟೇಲರು ದೃಷ್ಟಾಂತವಾಗಿದ್ದಾರೆ.

ಇಂಗ್ಲೆಂಡ್‌ನಲ್ಲಿ ಬ್ಯಾರಿಸ್ಟರ್ ಅಧ್ಯಯನವನ್ನು ಮುಗಿಸಿದ ನಂತರ ಭಾರತಕ್ಕೆ ಮರಳಿದ ಮೇಲೆ, ಬ್ರಿಟಿಷರ ಆಡಳಿತದ ವಿರುದ್ಧವಾಗಿ ಗಾಂಧೀಜಿ ಹಮ್ಮಿಕೊಂಡಿದ್ದ ಅಹಿಂಸಾ ಚಳವಳಿಯೆಡೆಗೆ ಸರ್ದಾರ್ ಪಟೇಲರು ಕ್ರಮೇಣ ಆಕರ್ಷಿಸಲ್ಪಟ್ಟರು. ಈ ನಿಟ್ಟಿನಲ್ಲಿ ತಮ್ಮ ಪ್ರತಿನಿಧಿಯಾಗಿ ಹೊಮ್ಮಿದ ಪಟೇಲರನ್ನು, ಖೇಡಾ ಚಳವಳಿಯನ್ನು ಮುನ್ನಡೆಸುವುದಕ್ಕೆ ಗಾಂಧೀಜಿ ಆಯ್ಕೆಮಾಡಿದರು. 'ನನ್ನನ್ನು ಅನುಸರಿಸುವುದಕ್ಕೆ ಸಿದ್ಧರಾಗಿದ್ದವರು ಒಬ್ಬಿಬ್ಬರಲ್ಲ; ಆದರೆ ನನ್ನ ಅಧೀನದ ಸೇನಾನಿ ಯಾರಾಗಿರಬೇಕೆಂಬುದರ ಬಗ್ಗೆ ನನಗೆ ನಿರ್ಧರಿಸಲಾಗಿರಲಿಲ್ಲ. ಆಗ ನನಗೆ ತೋಚಿದವರೇ ವಲ್ಲಭಭಾಯಿ' ಎಂಬ ಗಾಂಧೀಜಿ ಮಾತೇ ಇದಕ್ಕೆ ಸಾಕ್ಷಿ. ಗಾಂಧೀಜಿ ತಮ್ಮಲ್ಲಿಟ್ಟಿದ್ದ ನಂಬಿಕೆಯನ್ನು ಪಟೇಲರು ಹುಸಿಗೊಳಿಸಲಿಲ್ಲ; ಅಸಾಧಾರಣ ಸಂಘಟಕನಾಗಿ ಹೊಮ್ಮಿದ್ದರ ಜತೆಗೆ, ಜನನಾಯಕನಾಗಿಯೂ ಪಟೇಲರು ರೂಪುಗೊಂಡರು. ಗುಜರಾತ್‌ನ ಬಡೋಲಿಯಲ್ಲಿ ಕೃಷಿಕರ 'ಕರ-ನಿರಾಕರಣೆ ಚಳವಳಿ'ಯ ನೇತೃತ್ವ ವಹಿಸಿಕೊಂಡ ನಂತರ, 'ಸರ್ದಾರ್' ಎಂಬ ಬಿರುದು ಅವರ ಶಿರವೇರಿತು. ಗುಜರಾತ್ ಪ್ರವಾಹದ ಹಾವಳಿಗೆ ಸಿಲುಕಿ ಸಂಕಷ್ಟಕ್ಕೀಡಾದ ಸಂದರ್ಭದಲ್ಲಿ ಮುಂಚೂಣಿಯಲ್ಲಿದ್ದುಕೊಂಡು ಪರಿಹಾರ ಮತ್ತು ಪುನರ್ವಸತಿ ಕಾರ್ಯಾಚರಣೆಗಳನ್ನು ನಡೆಸಿದ ಪಟೇಲರು, ಅಹಮದಾಬಾದ್‌ನಲ್ಲಿ ಪ್ಲೇಗ್ ರೋಗ ಏಕಾಏಕಿ ಹಬ್ಬಿದಾಗ ದಣಿವರಿಯದೆ ದುಡಿದಿದ್ದು ಜನಮಾನಸದಲ್ಲಿ ಇಂದಿಗೂ ಹಚ್ಚಹಸಿರು.

ಅಖಂಡ ಭಾರತಕ್ಕೆ ಸಂಬಂಧಿಸಿದಂತೆ ಅವರಿಗಿದ್ದ ದೂರದೃಷ್ಟಿಯೇ, 'ಉಕ್ಕಿನ ಚೌಕಟ್ಟು' ಎಂದೇ ಅವರಿಂದ ವರ್ಣಿಸಲ್ಪಟ್ಟ ಅಖಿಲ ಭಾರತ ಆಡಳಿತಾತ್ಮಕ ಸೇವೆಗಳ ('ಆಲ್ ಇಂಡಿಯಾ ಅಡ್ಮಿನಿಸ್ಟ್ರೇಟಿವ್ ಸರ್ವೀಸಸ್') ಹುಟ್ಟಿಗೂ ಕಾರಣವಾಯಿತೆನ್ನಬೇಕು. ಪರೀಕ್ಷಣಾವಧಿಯಲ್ಲಿನ ಅಭ್ಯರ್ಥಿಗಳನ್ನು (ಅಂದರೆ ಪ್ರೊಬೇಷನರ್‌ಗಳನ್ನು) ಉದ್ದೇಶಿಸಿ ಮಾತನಾಡುತ್ತ ಅವರು, 'ದೈನಂದಿನ ಆಡಳಿತ ಕಾರ್ಯದಲ್ಲಿ ನಿಜಾರ್ಥದ ಸೇವಾಹುರುಪು ನಿಮಗೆ ಮಾರ್ಗದರ್ಶಿಯಾಗಿರಲಿ' ಎಂದು ಸಲಹೆ ನೀಡಿದ್ದರ ಜತೆಗೆ, ಬ್ರಿಟಿಷ್ ಭಾರತದಲ್ಲಿ 'ಐಸಿಎಸ್'ಗೆ ಸಂಬಂಧಿಸಿ ಚಾಲ್ತಿಯಲ್ಲಿದ್ದ 'ಅದು ಭಾರತೀಯವಾದದ್ದೂ ಆಗಿರಲಿಲ್ಲ, ನಾಗರಿಕವೂ ಆಗಿರಲಿಲ್ಲ, ಸೇವೆಯ ಯಾವ ಹುರುಪೂ ಅದರಲ್ಲಿ ಅಂತರ್ಗತವಾಗಿರಲಿಲ್ಲ' ಎಂಬ ಅಭಿಪ್ರಾಯವನ್ನು ಅವರಿಗೆ ನೆನಪಿಸಿದರು.

‘ಬ್ರಿಟಿಷರೇ, ಭಾರತ ಬಿಟ್ಟು ತೊಲಗಿ’ ಆಂದೋಲನದ ಸಂದರ್ಭದಲ್ಲಿ, ‘ಪರಸ್ಪರ ಕಚ್ಚಾಟದಲ್ಲಿ ತೊಡಗುವ ವರ್ತನೆಯನ್ನು, ಮೇಲು-ಕೀಳು ಎಂಬ ಭಾವನೆಯನ್ನು ನಾವು ಕಿತ್ತೊಗೆಯಬೇಕಿದೆ, ಸಮಾನತೆಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕಿದೆ ಹಾಗೂ ಅಸ್ಪೃಶ್ಯತೆಯಂಥ ಪಿಡುಗನ್ನು ಮೂಲೋತ್ಪಾಟನ ಮಾಡಬೇಕಿದೆ... ಒಂದೇ ತಂದೆಯ ಮಕ್ಕಳ ಹಾಗೆ ನಾವು ಬಾಳಬೇಕಿದೆ’ ಎಂದಿದ್ದು ಪಟೇಲರೇ. ಅವರ ಈ ಮಾತುಗಳು ಇಂದಿಗೂ ಹೆಚ್ಚು ಪ್ರಸ್ತುತವಾಗಿವೆ ಎನ್ನಲಡ್ಡಿಯಿಲ್ಲ.

ಪಟೇಲರೆಂಬ ಸೂರ್ಯ ಅಸ್ತಂಗತನಾದ ನಂತರ, ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹಾಗೂ ಸ್ವಾತಂತ್ರ ದಕ್ಕಿಸಿಕೊಂಡ ನಂತರದಲ್ಲಿ ಅವರು ನಿರ್ವಹಿಸಿದ್ದ ಪ್ರಭಾವಶಾಲಿ ಪಾತ್ರದ ಕುರಿತಾಗಿ ‘ಮ್ಯಾಂಚೆಸ್ಟರ್ ಗಾರ್ಡಿಯನ್’ ಪತ್ರಿಕೆಯು ‘ಪಟೇಲರು ಸ್ವಾತಂತ್ರ್ಯ ಹೋರಾಟದ ಸಂಘಟಕ ಮಾತ್ರವೇ ಆಗಿರಲಿಲ್ಲ, ಹೋರಾಟ ಸಂಪನ್ನಗೊಂಡ ನಂತರ ಹುಟ್ಟಿಕೊಂಡ ಹೊಸ ಆಡಳಿತ ವ್ಯವಸ್ಥೆಯ ಶಿಲ್ಪಿಯೂ ಆಗಿದ್ದರು. ಒಬ್ಬನೇ ವ್ಯಕ್ತಿಯು, ಓರ್ವ ಕ್ರಾಂತಿಕಾರಿಯಾಗಿಯೂ ಮತ್ತು ಮುತ್ಸದ್ದಿಯಾಗಿಯೂ ಯಶಸ್ಸು ಕಾಣುವುದು ವಿರಳಾತಿವಿರಳ; ಆದರೆ ಸರ್ದಾರ್ ಪಟೇಲರು ಈ ಗ್ರಹಿಕೆಗೆ ಹೊರತಾಗಿದ್ದರು’ ಎಂಬುದಾಗಿ ಯಥೋಚಿತವಾಗಿಯೇ ವ್ಯಾಖ್ಯಾನಿಸಿದ್ದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿ. ಆದರೆ, ಇತಿಹಾಸದಲ್ಲಿನ ಅತ್ಯಂತ ವಿಷಮ ಕಾಲಘಟ್ಟದಲ್ಲಿ ಭಾರತವನ್ನು ನಿಜಾರ್ಥದಲ್ಲಿ ಒಗ್ಗೂಡಿಸುವ ಕೈಂಕರ್ಯಕ್ಕೆ ಸರ್ದಾರ್ ಪಟೇಲರು ನೀಡಿದ ಅಗಾಧ ಕೊಡುಗೆಯನ್ನು ಸಮರ್ಥವಾಗಿ-ಸಮರ್ಪಕವಾಗಿ ಗುರುತಿಸುವಂಥ ಕೆಲಸವಾಗದಿರುವುದು ನಿಜಕ್ಕೂ ದುರದೃಷ್ಟಕರ.

ಅಂತಿಮವಾಗಿ ನಾನು ಹೇಳಲು ಬಯಸುವುದು ಇಷ್ಟೇ-ವಿಶ್ವದಲ್ಲಿನ ಅತಿದೊಡ್ಡ ಆರ್ಥಿಕತೆಗಳಲ್ಲೊಂದಾಗುವುದರೆಡೆಗೆ ದೇಶವು ಹೆಜ್ಜೆ ಹಾಕುತ್ತಿರುವ ಈ ಸಂದರ್ಭದಲ್ಲಿ, ಆಧುನಿಕ ಮತ್ತು ಏಕೀಕೃತ ಭಾರತವನ್ನು ಕಟ್ಟುವಲ್ಲಿ ಸರ್ದಾರ್ ಪಟೇಲರು ನೀಡಿದ ಅಮೂಲ್ಯ ಕೊಡುಗೆಯನ್ನು ಪ್ರತಿಯೊಬ್ಬ ಭಾರತೀಯನೂ ಸ್ಮರಿಸುವಂತಾಗಬೇಕು.

## ಪುತ್ಥಳಿ ಕಾಮಗಾರಿ ಶೇ.70 ಪೂರ್ಣ

ಗುಜರಾತಿನಲ್ಲಿ ನಿರ್ಮಾಣವಾಗುತ್ತಿರುವ ವಿಶ್ವದ ಅತಿ ಎತ್ತರದ ಪುತ್ಥಳಿ ಸ್ಟ್ಯಾಚು ಆಫ್ ಯೂನಿಟಿಯ ಕಾಮಗಾರಿ ಶೇ.70ರಷ್ಟು ಪೂರ್ಣಗೊಂಡಿದೆ. ಸರ್ದಾರ್ ಪಟೇಲರ ಪುತ್ಥಳಿ, ಥೀಮ್ ಪಾರ್ಕ್ ಸೇರಿದಂತೆ ಈ ಸಮಗ್ರ ಯೋಜನೆ 2,989 ಕೋಟಿ ರೂ. ವೆಚ್ಚದಲ್ಲಿ ಅನುಷ್ಠಾನಕ್ಕೆ ಬರುತ್ತಿದೆ. ಈಗಾಗಲೇ, 1100 ಕೋಟಿ ರೂ. ವೆಚ್ಚ ಮಾಡಿದ್ದು ಕಾಂಕ್ರೀಟ್ ಹಂತದ ಕಾಮಗಾರಿ ಪೂರ್ಣಗೊಂಡಿದೆ. 2 ಲಕ್ಷ ಮೆಟ್ರಿಕ್ ಟನ್ ಸಿಮೆಂಟ್, 7,500 ಮೆಟ್ರಿಕ್ ಟನ್ ಉಕ್ಕಿನಿಂದ ಇದು ತಯಾರಿಸಲಾಗುತ್ತಿದ್ದು, ಎರಡು ಬೃಹತ್ ಲಿಫ್ಟ್‌ಗಳನ್ನು ನಿರ್ಮಿಸಲಾಗುತ್ತಿದೆ. ಸ್ಟ್ಯಾಚು ಆಫ್ ಯೂನಿಟಿ ಪ್ರವಾಸೋದ್ಯಮ ಮತ್ತು ಪ್ರೇರಣೆ ನಿಟ್ಟಿನಲ್ಲಿ ರಾಷ್ಟ್ರಕ್ಕೆ ಮೈಲಿಗಲ್ಲಾಗಿ ಸಾಬೀತಾಗಲಿದೆ ಎಂಬ ನಿರೀಕ್ಷೆ ಕ್ಷೇತ್ರತಜ್ಞರದ್ದು.

✍ *ಮಾಹಿತಿ ವೇದಿಕೆ*?

ಇಂದಿರಾಗಾಂಧಿಯವರ 100 ನೇ ಜನ್ಮ ದಿನಾಚರಣೆ*✍

*ಜನನ- 19-11-1917*

*ಮರಣ-31-10-1984*

*ನೂರು ವರ್ಷ ನೂರೊಂದು ಮುಖ*

*ಇಂದಿರಾ ಪ್ರಿಯದರ್ಶಿನಿ*

*ಅಪಾರ ಜನಪ್ರಿಯತೆ, ಅಷ್ಟೇ ವಿರೋಧ ಎರಡನ್ನೂ ಎದುರಿಸಿ ಸೋಲು-ಗೆಲುವುಗಳನ್ನು ಕಂಡ ನಾಯಕಿ ಇಂದಿರಾ. ಗಟ್ಟಿ ನಿರ್ಧಾರಗಳನ್ನು ಕೈಗೊಳ್ಳಲು ಹಿಂದೆ-ಮುಂದೆ ನೋಡದ ಈ ನಾಯಕಿ ಗರೀಬಿ ಹಟಾವೋ, ಬ್ಯಾಂಕುಗಳ ರಾಷ್ಟ್ರೀಕರಣ ಕಾರ್ಯಕ್ರಮದ ಮುಖಾಂತರ ಜನಮನ್ನಣೆ ಗಳಿಸಿದರು. ಪಾಕಿಸ್ತಾನದ ಭಂಡತನಕ್ಕೆ ತಕ್ಕ ಉತ್ತರ ನೀಡಿ, ದಿಟ್ಟ ವಿದೇಶಾಂಗ ನೀತಿಯನ್ನು ಪರಿಚಯಿಸಿದರು. ತುರ್ತು ಪರಿಸ್ಥಿತಿಯನ್ನು ಹೇರುವ ಮೂಲಕ ದೇಶದ ಬಹುತೇಕ ಜನರ ಅಸಮಾಧಾನಕ್ಕೂ ಕಾರಣರಾದರು. ಹೀಗೆ ವಿಶಿಷ್ಟ ಪ್ರಭಾವಳಿಯ ಇಂದಿರಾರದ್ದು ಬಹು ಆಯಾಮದ ವ್ಯಕ್ತಿತ್ವ ಎಂಬುದು ನಿರ್ವಿವಾದ.*

*ಮಾಜಿ ಪ್ರಧಾನಮಂತ್ರಿ ಇಂದಿರಾ ಗಾಂಧಿಯವರ ಬಗ್ಗೆ ವಿಚಾರ ಮಾಡುವಾಗೆಲ್ಲಾ 1982ರ ನ.19ರಂದು ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಖ್ಯಾತ ವ್ಯಂಗ್ಯಚಿತ್ರಕಾರ ಶಂಕರ್ ಅವರದೊಂದು ಕಾರ್ಟೂನ್ ನನಗೆ ತಪ್ಪದೇ ನೆನಪಾಗುತ್ತದೆ. ಆ ಕಾರ್ಟೂನ್‌ನಲ್ಲಿದ್ದ ಇಬ್ಬರ ನಡುವಿನ ಸಂಭಾಷಣೆ ಹೀಗಿತ್ತು-*

*ಮೊದಲ ವ್ಯಕ್ತಿ: ಅಮೆರಿಕಾದಿಂದ ಪಾಕಿಸ್ತಾನ F 16 ಯುದ್ಧವಿಮಾನಗಳನ್ನು ಪಡೆದುಕೊಂಡಿದೆಯಲ್ಲ?*

*ಎರಡನೆಯ ವ್ಯಕ್ತಿ: ನಮ್ಮಲ್ಲಿ MIG 65 ಇರೋವಾಗ ಚಿಂತೆ ಯಾಕೆ?*

*ಮೊ. ವ್ಯ.: MIG -65! ಅದ್ಯಾವುದು ಅದು? ಯುದ್ಧವಿಮಾನ ಗಳ ಸೀರೀಸ್‌ನಲ್ಲಿರೋದು 21, 23, 25, 27, 29 ಮಾತ್ರ.*

*ಎ. ವ್ಯ.: MIG ಅಂದ್ರೆ Mrs. Indira Gandhi. ಇಂದು ಅವರಿಗೆ 65 ವರ್ಷ!*

*ಮಿಸೆಸ್ ಇಂದಿರಾ ಗಾಂಧಿ ಇರುವಾಗ ಪಾಕಿಸ್ತಾನಕ್ಕೆ ನಾವು ಹೆದರುವ ಅಗತ್ಯವೇ ಇಲ್ಲ ಎಂಬ

ವಿಶ್ವಾಸವನ್ನು ಈ ಕಾರ್ಟೂನ್ ಮಾರ್ಮಿಕವಾಗಿ ಸಾರುತ್ತದೆ. ನಮ್ಮ ಪಕ್ಕೆಗೆ ಮುಳ್ಳಾಗಿರುವ ಆ ದೇಶಕ್ಕೆ ಇಂದಿರಾ ಕಲಿಸಿದಂತಹ ಪಾಠವನ್ನುಯಾವ ಪ್ರಧಾನಿಯೂ ಕಲಿಸಿಲ್ಲ. ಇದಕ್ಕೆ 1971ರ ಯುದ್ಧದ ಉದಾಹರಣೆಯೊಂದೇ ಸಾಕು. ಈ ಯುದ್ಧದಲ್ಲಿ ಭಾರತದ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಇಂದಿರಾ ಅನುಸರಿಸಿದ ನೀತಿಗಳು ಅತ್ಯಂತ ವಿವೇಕವನ್ನೂ, ಚಾಣಾಕ್ಷತೆಯನ್ನೂ, ಅವುಗಳಿಗೆ ಪೂರಕವಾಗುವ ಮಿತಿಯಲ್ಲಿ ಕುಟಿಲತೆಯನ್ನೂ ಹೊಂದಿದ್ದವು. ಆ ನೀತಿಗಳ ಮೂರು ಆಯಾಮಗಳು ಹೀಗಿದ್ದವು- ಮೊದಲನೆಯದಾಗಿ, ಶತ್ರುರಾಷ್ಟ್ರವೊಂದರ ಸಂಕಷ್ಟವನ್ನು ತನ್ನ ದೇಶದ ಅನುಕೂಲಕ್ಕೆ ಬಳಸಿಕೊಳ್ಳುವ ಕುಟಿಲತೆ ಇಂದಿರಾರಲ್ಲಿತ್ತು. ಎರಡನೆಯದಾಗಿ ತನಗೆ ತಿಳಿಯದಿದ್ದ ವಿಷಯಗಳಲ್ಲಿ ಬಲ್ಲವರ ಅಭಿಪ್ರಾಯವನ್ನು ಮಾನ್ಯಮಾಡುವ ವಿವೇಕವನ್ನು ಅವರು ಪ್ರದರ್ಶಿಸಿದರು. ಮೂರನೆಯದಾಗಿ, ವೈರಿಯ ತಂತ್ರಕ್ಕೆ ತಕ್ಕ ಪ್ರತಿತಂತ್ರವನ್ನು ತಕ್ಷಣವೇ ರೂಪಿಸುವ ಚಾಣಾಕ್ಷತೆಯನ್ನವರು ಹೊಂದಿದ್ದರು. ಅವರ ಈ ಸ್ವಭಾವಗಳು ತಂದೆ ಜವಾಹರ್‌ಲಾಲ್ ನೆಹರುರ ಸ್ವಭಾವಕ್ಕೆ ಸಂಪೂರ್ಣ ವಿರುದ್ಧವಾಗಿದ್ದವು.*

*1970ರ ಮಧ್ಯಭಾಗದಲ್ಲೇ ಪೂರ್ವ ಪಾಕಿಸ್ತಾನದಲ್ಲಿ ಪ್ರತ್ಯೇಕತೆಯ ಕೂಗೆದ್ದು ಮರುವರ್ಷದ ಮಾರ್ಚ್‌ನಲ್ಲಿ ಅದು ಸಶಸ್ತ್ರ ಸ್ವಾತಂತ್ರ್ಯ ಸಂಗ್ರಾಮದ ಹಂತಕ್ಕೇರಿದಾಗ ಅದನ್ನು ಭಾರತಕ್ಕೆ ಅನುಕೂಲವಾಗುವಂತೆ ಉಪಯೋಗಿಸಿಕೊಳ್ಳಲು ಇಂದಿರಾ ಹಂಚಿಕೆ ಹಾಕಿ ಕಾರ್ಯಯೋಜನೆ ರೂಪಿಸಿದರು. ಪೂರ್ವ ಪಾಕಿಸ್ತಾನದಲ್ಲಿ ಪಾಕಿಸ್ತಾನೀ ಸೇನೆಯ ಶಕ್ತಿಯನ್ನು ಕುಂದಿಸುವುದು ಮೊದಲ ಹಂತ.*

*ತನ್ನ ವಾಯುಪ್ರದೇಶದ ಮೂಲಕ ಪಾಕಿಸ್ತಾನ ತನ್ನ ಎರಡೂ ಅಂಗಗಳ ನಡುವೆ ನೇರ ವಿಮಾನಯಾನ ಸಂಪರ್ಕ ಹೊಂದಲು ಭಾರತ ಅಂತಾರಾಷ್ಟ್ರೀಯ ವಾಯುಯಾನ ನಿಯಮಗಳಿಗೆ ಅನುಗುಣವಾಗಿ ಅವಕಾಶ ನೀಡಿತ್ತು. ಈ ಅವಕಾಶವನ್ನು ನಾಗರಿಕರ ಹಾಗೂ ನಾಗರಿಕ ವಸ್ತುಗಳ ಸಾಗಾಣಿಕೆಗಾಗಿ ಮಾತ್ರ ಪಾಕಿಸ್ತಾನ ಉಪಯೋಗಿಸಿಕೊಳ್ಳಬೇಕಾಗಿತ್ತು. ಆದರೆ ಪೂರ್ವ ಪಾಕಿಸ್ತಾನದಲ್ಲಿ ಪರಿಸ್ಥಿತಿ ಹದಗೆಟ್ಟಾಗ ಯಾಹ್ಯಾ ಖಾನ್ ಸರಕಾರ ನಿಯಮಗಳನ್ನು ಉಲ್ಲಂಘಿಸಿ ಸೈನಿಕರನ್ನೂ, ಸೇನಾಸಾಮಗ್ರಿಗಳನ್ನೂ ರಹಸ್ಯವಾಗಿ ಭಾರತದ ವಾಯುಪ್ರದೇಶದ ಮೂಲಕ ಸಾಗಿಸತೊಡಗಿತು. ಇದು ಭಾರತ ಸರಕಾರಕ್ಕೆ ತಿಳಿದರೂ ಸ್ಪಷ್ಟ ಆಧಾರಗಳಿಲ್ಲದೇ ಪಾಕಿಸ್ತಾನಕ್ಕೆ ನೀಡಿದ್ದ ಸೌಲಭ್ಯವನ್ನು ಹಿಂತೆಗೆದುಕೊಳ್ಳುವುದು ಸಾಧ್ಯವಿರಲಿಲ್ಲ.*

*ಅದು 30 ಜನವರಿ 1971. ಶ್ರೀನಗರದಿಂದ ಜಮ್ಮುವಿಗೆ ಹೊರಟ ಇಂಡಿಯನ್ ಏರ್‌ಲೈನ್ಸ್ ಗಂಗಾ ವಿಮಾನವನ್ನು ಹಶೀಮ್ ಖುರೇಶಿ ಎಂಬ ಹದಿವಯಸ್ಸಿನ ಕಾಶ್ಮೀರೀ ಪ್ರತ್ಯೇಕತಾವಾದಿಯೊಬ್ಬ ಅಪಹರಿಸಿ ಲಾಹೋರ್‌ಗೆ*

*ಕೊಂಡೊಯ್ದು, ಭಾರತದ ಜೈಲುಗಳಲ್ಲಿರುವ ತನ್ನ ಸಹಚರರನ್ನು ಬಿಡುಗಡೆಗೊಳಿಸದಿದ್ದರೆ ಪ್ರಯಾಣಿಕರನ್ನು ಕೊಲ್ಲುವುದಾಗಿಯೂ, ವಿಮಾನವನ್ನು ಸ್ಫೋಟಿಸುವುದಾಗಿಯೂ ಬೆದರಿಕೆಯಿತ್ತ. ಭಾರತ ಸರಕಾರ ಮಣಿಯದಿದ್ದಾಗ ಫೆಬ್ರವರಿ 1ರಂದು ಅಪಹರಣಕಾರ ಪ್ರಯಾಣಿಕರನ್ನು ಬಿಡುಗಡೆಗೊಳಿಸಿದ, ಆದರೆ ವಿಮಾನವನ್ನು ನಾಶಪಡಿಸಿದ. ಭಾರತಕ್ಕೆ ಹೀಗೆ ಅವಮಾನವಾದದ್ದು ಪಾಕಿಸ್ತಾನೀ ನಾಯಕರಿಗೆ ಸಂತೋಷ ತಂದಿತು. ವಿದೇಶ ಮಂತ್ರಿ ಜುಲ್ಫಿಕರ್ ಆಲಿ ಭುಟ್ಟೋರಂತೂ ಲಾಹೋರ್ ಏರ್‌ಪೋರ್ಟ್‌ಗೆ ಹೋಗಿ ಬಹಿರಂಗವಾಗಿಯೇ ಅಪಹರಣಕಾರನ ಬೆನ್ನುತಟ್ಟಿದರು. ಅಪಹರಣಕಾರ ಪಾಕಿಸ್ತಾನದಲ್ಲಿ ಹೀರೋ ಆಗಿಬಿಟ್ಟ. ಅಪಹರಣಕಾರನಿಗೆ

ಪಾಕಿಸ್ತಾನ ನೀಡಿದ ಪ್ರೋತ್ಸಾಹ, ಸಹಕಾರ, ಸೌಲಭ್ಯಗಳನ್ನು ಭಾರತ-ವಿರೋಧೀ ಕೃತ್ಯವೆಂದು ಬಣ್ಣಿಸಿದ ಭಾರತ ಸರಕಾರ ಆ ನೆಪವೊಡ್ಡಿ ತನ್ನ ವಾಯುಪ್ರದೇಶವನ್ನು ಉಪಯೋಗಿಸಿಕೊಳ್ಳಲು ಪಾಕಿಸ್ತಾನಕ್ಕೆ ನೀಡಿದ್ದ ಸೌಲಭ್ಯವನ್ನು ಹಿಂತೆಗೆದುಕೊಂಡಿತು. ಪರಿಣಾಮವಾಗಿ ಪೂರ್ವ ಪಾಕಿಸ್ತಾನ ತಲುಪಲು ಪಾಕಿಸ್ತಾನೀ ಸೇನೆ ಇಡೀ ಭಾರತ ಪರ್ಯಾಯದ್ವೀಪವನ್ನು ಸುತ್ತಿ ಶ್ರೀಲಂಕಾ ಮೂಲಕ ಸಾಗುವ ದೀರ್ಘಕಾಲಿಕ, ದುಬಾರಿ ಮಾರ್ಗ ಹಿಡಿಯಬೇಕಾಯಿತು.*

*ಆದರೆ ಇಡೀ ವಿಮಾನಾಪಹರಣ ಪ್ರಕರಣ ಭಾರತೀಯ ಗುಪ್ತಚರ ಇಲಾಖೆ ್ಕಗ ರಹಸ್ಯವಾಗಿ ರೂಪಿಸಿದ ಷಡ್ಯಂತ್ರವಾಗಿತ್ತು ಮತ್ತು ಅಪಹರಣಕಾರ ಭಾರತದ ಏಜಂಟ್ ಎನ್ನುವುದು ವರ್ಷದೊಳಗೆ ಬಹಿರಂಗಗೊಂಡಿತು. ಪಾಕಿಸ್ತಾನಕ್ಕೆ ನೀಡಿದ್ದ ವಾಯುಮಾರ್ಗದ ಉಪಯೋಗದ ಸೌಲಭ್ಯವನ್ನು ಹಿಂತೆಗೆದುಕೊಳ್ಳಲು ನೆಪವೊಂದರ ಸೃಷ್ಟಿಗೋಸ್ಕರ ಇಂದಿರಾ ಸರಕಾರ ಹೂಡಿದ ಹೂಟ ಇದಾಗಿತ್ತು!*

*ಈ ಬಗೆಯಾಗಿ ಪೂರ್ವ ಪಾಕಿಸ್ತಾನದಲ್ಲಿ ಪಾಕ್ ಸೇನೆಗೆ ಅನಾನುಕೂಲವುಂಟುಮಾಡುವುದರಲ್ಲಿ ಯಶಸ್ವಿಯಾದ ನಂತರ ಮುಂದೆ ಜೂನ್‌ನಲ್ಲಿ ಪಾಕಿಸ್ತಾನವನ್ನು*

*ಯುದ್ಧಕ್ಕೆಳೆದು ಪೂರ್ವ ಪಾಕಿಸ್ತಾನವನ್ನು ಬೇರ್ಪಡಿಸಲು ಇಂದಿರಾ ಗಾಂಧಿ ಹಂಚಿಕೆ ಹಾಕಿದರು. ಆದರೆ ಸೇನಾ ದಂಡನಾಯಕ ಫೀಲ್ಡ್ ಮಾರ್ಷಲ್ ಮಾಣಿಕ್ ಶಾಗೆ ಇದು ಸಮ್ಮತವೆನಿಸಲಿಲ್ಲ.*

*ಅವರ ಪ್ರಕಾರ ಬೇಸಗೆಯಲ್ಲಿ ಯುದ್ಧ ಹೂಡುವುದು ಸಾಮರಿಕವಾಗಿ ನಮಗೆ ಅನುಕೂಲಕರವಾಗಿರಲಿಲ್ಲ. ಆ ಸಮಯದಲ್ಲಿ ಸಿಕ್ಕಿಂ ಮತ್ತು ಅರುಣಾಚಲ ಪ್ರದೇಶಗಳು ಚೀನಾ (ಟಿಬೆಟ್) ಜತೆ ಹೊಂದಿರುವ ಹಿಮಾಲಯದ ಗಡಿಯಲ್ಲಿನ ಪರ್ವತ ಕಣಿವೆಗಳು ಹಿಮರಹಿತವಾಗಿರುವುದರಿಂದ ಪಾಕಿಸ್ತಾನದ ಪರವಾಗಿ ಚೀನಾ ತನ್ನ ಸೇನೆಯನ್ನು ಸುಲಭವಾಗಿ ಈಶಾನ್ಯ ಭಾರತದೊಳಗೆ ನುಗ್ಗಿಸುವ ಅಪಾಯವಿದೆ; ಜತೆಗೇ ಸದ್ಯದಲ್ಲೇ ಮಾನ್ಸೂನ್ ಆರಂಭವಾಗುವುದರಿಂದ ಸೇನೆ ಚಲನೆಗೆ ತೀವ್ರ ತೊಡಕಾಗುತ್ತದೆ ಎಂದೂ ಮಾಣಿಕ್ ಶಾ ವಾದಿಸಿದರು. ಈ ವಾದದಲ್ಲಿನ ಸತ್ಯಾಂಶವನ್ನು ಗುರುತಿಸಿದ ಇಂದಿರಾ ಯುದ್ಧವನ್ನು ಚಳಿಗಾಲಕ್ಕೆ ಮುಂದೂಡಿದರು. ಇದಕ್ಕೆ ವಿರುದ್ಧವಾಗಿ, 'ಸೇನೆಗೆ ಸಂಬಂಧಿಸಿದ ವಿಷಯಗಳನ್ನು ನೆಹರೂ ಆಲಿಸುವುದೇ ಇಲ್ಲ, ತಮ್ಮ ಅರ್ತಾಕ ಅಭಿಪ್ರಾಯಗಳನ್ನೇ ನಮ್ಮ ಮೇಲೆ ಹೇರುತ್ತಾರೆ' ಎಂದು ಜನರಲ್ ತಿಮ್ಮಯ್ಯ ನೋವು ವ್ಯಕ್ತಪಡಿಸಿದ್ದನ್ನು ನೆನೆಯಬಹುದು.*

*ಮುಂದಿನ ದಿನಗಳಲ್ಲಿ ಇಂದಿರಾ ಮತ್ತು ಮಾಣಿಕ್ ಶಾ ಯುದ್ಧಕ್ಕೆ ಅಗತ್ಯವಾದ ತಯಾರಿಗಳನ್ನು ಮಾಡತೊಡಗಿದರು. ರಾಜತಾಂತ್ರಿಕವಾಗಿ ವಿಶ್ವರಂಗದಲ್ಲಿ ಭಾರತದ ನಿಲುವನ್ನು ಗಟ್ಟಿಗೊಳಿಸುವ ಜವಾಬ್ದಾರಿಯನ್ನು ಇಂದಿರಾ ತೆಗೆದುಕೊಂಡರು. ಪ್ಯಾರಿಸ್, ಲಂಡನ್, ಮಾಸ್ಕೋ, ವಾಷಿಂಗ್‌ಟನ್‌ಗಳಿಗೆ ಭೇಟಿಯಿತ್ತು ಪೂರ್ವ ಪಾಕಿಸ್ತಾನದಲ್ಲಿ ಪಾಕ್ ಸೇನೆಯ ಹೇಯ ಕೃತ್ಯಗಳನ್ನು ವಿಶ್ವನಾಯಕರ ಗಮನಕ್ಕೆ ತಂದರು. ಪಾಕ್ ಹತ್ಯಾಕಾರಿಗಳನ್ನು ತಡೆಯಲು, ಪೂರ್ವ ಪಾಕಿಸ್ತಾನೀಯರ ಮಾನವಹಕ್ಕುಗಳನ್ನು ಕಾಪಾಡಲು ಬಲಪ್ರಯೋಗವೊಂದೇ ಮಾರ್ಗ ಎಂಬ ಸೂಚನೆಯನ್ನು ನೀಡಿ ಅದಕ್ಕೆ ಬೆಂಬಲ ಗಳಿಸಿಕೊಳ್ಳಲು ಪ್ರಯತ್ನಿಸಿದರು. ಪಾಕಿಸ್ತಾನದ ನಾಯಕತ್ವದ ಶಾಂತಿ-ವಿರೋಧಿ ನಿಲುವನ್ನು ಜಗತ್ತಿಗೆ ಮನವರಿಕೆ ಮಾಡಿಕೊಡಲು ಅವರು ಬಳಸಿದ ಉಪಮೆ 'ಬಿಗಿದ ಮುಷ್ಟಿಯೊಂದಿಗೆ ಹಸ್ತಲಾಘವ ಎಂದಿಗೂ ಸಾಧ್ಯವಿಲ್ಲ' ಎಂದು. ಇಂದಿರಾರ ಈ ಮಾತು ಇಂದು ಅಂತಾರಾಷ್ಟ್ರೀಯ ರಾಜಕಾರಣದ ಅಧ್ಯಯನದ

ಭಾಗವಾಗಿಹೋಗಿದೆ. 'ಪೂರ್ವ ಪಾಕಿಸ್ತಾನದ ಘಟನೆಗಳು ಪಾಕಿಸ್ತಾನದ ಆಂತರಿಕ ವಿಷಯ, ಅದರಲ್ಲಿ ಭಾರತವೇಕೆ ಮೂಗು ತೂರಿಸಬೇಕು?' ಎಂದು ವಾಷಿಂಗ್‌ಟನ್‌ನಲ್ಲಿ ಪತ್ರಕರ್ತನೊಬ್ಬ ಕೇಳಿದ ಪ್ರಶ್ನೆಗೆ ಇಂದಿರಾ ಕೊಟ್ಟ ಉತ್ತರ ಇಡೀ ಪಶ್ಚಿಮ ಜಗತ್ತಿನ ಕಣ್ಣು ತೆರೆಸುವಂತಿತ್ತು: 'ಪೂರ್ವ ಪಾಕಿಸ್ತಾನದಲ್ಲಿನ ಮಾರಣಹೋಮದ ಬಗ್ಗೆ ಸುಮ್ಮನಿರಬೇಕೆಂದು ನೀವೀಗ ನಮಗೆ ಉಪದೇಶಿಸುತ್ತೀರಿ. ಹಾಗಿದ್ದರೆ, ಹಿಟ್ಲರ್‌ನ ಸೈನಿಕರು ಪೋಲ್ಯಾಂಡ್‌ನಲ್ಲಿ ನರಮೇಧ ಆರಂಭಿಸಿದಾಗ ನೀವು ಸುಮ್ಮನಿರಬಹುದಾಗಿತ್ತಲ್ಲ? ಯಾಕೆ ಮಧ್ಯಪ್ರವೇಶಿಸಿದಿರಿ? ಇದರರ್ಥ, ಬಂಗಾಳಿಗಳ ರಕ್ತಕ್ಕಿಂತ ಬಿಳೀ ಯೂರೋಪಿಯನ್ನರ ರಕ್ತ ಶ್ರೇಷ್ಠ, ರಕ್ಷಿಸಲು ಯೋಗ್ಯ ಎಂದು ನಿಮ್ಮ ಅಭಿಪ್ರಾಯವೇ?'*

*ಇಷ್ಟಲ್ಲದೇ, ಜುಲೈನಲ್ಲಿ ಭಾರತದ ವಿರುದ್ಧ ವಾಷಿಂಗ್‌ಟನ್-ಬೀಜಿಂಗ್-ಇಸ್ಲಾಮಾಬಾದ್‌ಗಳು ಸೇರಿದ ಒಂದು ದುಷ್ಟಕೂಟ ರೂಪುಗೊಂಡಾಗ ಹಾಗೂ ಭಾರತವೇನಾದರೂ ಪಾಕಿಸ್ತಾನದ ಮೇಲೆ ಯುದ್ಧ ಸಾರಿದರೆ ಅಮೆರಿಕಾ ಮತ್ತು ಚೀನಾಗಳು ಪಾಕಿಸ್ತಾನದ ಪರ ನಿಲ್ಲುವ ಸಾಧ್ಯತೆ ಕಂಡುಬಂದಾಗ ಇಂದಿರಾ ಮರುತಿಂಗಳೇ ಸೋವಿಯೆತ್ ಯೂನಿಯನ್ ಜತೆ ಸ್ನೇಹ ಮತ್ತು ಸೌಹಾರ್ದಗಳ ಒಪ್ಪಂದ ಮಾಡಿಕೊಂಡರು. ಈ ಒಪ್ಪಂದ ಮೇಲ್ನೋಟಕ್ಕೆ ಒಂದು ಸಾಮಾನ್ಯ ನಾಗರಿಕ ಒಪ್ಪಂದದಂತೆ ಕಂಡರೂ ವಾಸ್ತವವಾಗಿ ಸೇನಾ ಒಪ್ಪಂದವೊಂದಕ್ಕೆ ಸಮಾನವಾಗಿತ್ತು. ಒಪ್ಪಂದದ ಹನ್ನೆರಡನೇ ಕಲಮಿನ ಪ್ರಕಾರ ಅಗತ್ಯ ಬಿದ್ದರೆ ಭಾರತಕ್ಕೆ ಸೇನಾ ಸಹಾಯ ನೀಡಲು ಸೋವಿಯೆತ್ ಯೂನಿಯನ್ ಬದ್ಧವಾಗಿತ್ತು. ಪಾಕಿಸ್ತಾನದ ಜತೆಗಿನ ತನ್ನ ಯುದ್ಧದಲ್ಲಿ ಅಮೆರಿಕಾ ಮತ್ತು ಚೀನಾಗಳು ಪ್ರವೇಶಿಸದಂತೆ ತಡೆಯಲು ಇಂದಿರಾ ರೂಪಿಸಿದ ತಂತ್ರ ಇದಾಗಿತ್ತು! ಅಂತಿಮವಾಗಿ ಡಿಸೆಂಬರ್‌ನಲ್ಲಿ ಯುದ್ಧ ಆರಂಭವಾದಾಗ ಚೀನಾದ ಕೈಗಳನ್ನು ಕಟ್ಟಿಹಾಕಿದ್ದು ಇಂದಿರಾರ ಈ ರಾಜತಂತ್ರ ಮತ್ತು ಮಾಣಿಕ್ ಶಾರ ರಣತಂತ್ರ. ಇಂದಿರಾರ ಈ ವಾಸ್ತವಪ್ರಜ್ಞೆ ಹಾಗೂ ಚಾಣಾಕ್ಷತೆಯ ಪರಿಣಾಮವಾಗಿ ಭಾರತ 1971ರಲ್ಲಿ ಅಭೂತಪೂರ್ವ ವಿಜಯ ಸಾಧಿಸಿತು.*

*ಬಾಂಗ್ಲಾದೇಶದ ವಿಮೋಚನೆಯಿಂದ ಇಂದಿರಾ ಈಶಾನ್ಯ ಭಾರತಕ್ಕಿದ್ದ ಮಹಾನ್ ಗಂಡಾಂತರವನ್ನೂ ದೂರಮಾಡಿದರು. ಪಾಕಿಸ್ತಾನದ ಸಹಕಾರದಿಂದ ಚೀನಾ ನಮ್ಮ ಪೂರ್ವೋತ್ತರ ರಾಜ್ಯಗಳನ್ನು ದೇಶದ ಮುಖ್ಯ ಭೂಭಾಗದಿಂದ ಕತ್ತರಿಸಲು ಪ್ರಯತ್ನಿಸುವ ಸಾಧ್ಯತೆ ಬಹಳವಾಗಿತ್ತು. ಆದರೆ 71ರ ನಂತರ ಆ ಅಪಾಯ ದೂರಾಯಿತು.*

*ಇಂದಿರಾ 1974ರಲ್ಲಿ ಅಣುಬಾಂಬ್ ಪರೀಕ್ಷೆ ನಡೆಸಿದರಷ್ಟೇ. ಆದರೆ, ನಮ್ಮ ಅಣುಕಾರ್ಯಕ್ರಮಗಳು ಶಾಂತಿಯುತ ಎಂದು ಹೇಳುಹೇಳುತ್ತಲೇ ಇಂದಿರಾ ರಹಸ್ಯವಾಗಿ ಅಣ್ವಸ್ತ್ರಗಳನ್ನು ಉತ್ಪಾದಿಸಿ ಸಿದ್ಧವಾಗಿರಿಸಿದ್ದರು. ಇದರ ಪರಿಣಾಮವಾಗಿಯೇ 1990ರ ಜುಲೈನಲ್ಲಿ ಪಾಕಿಸ್ತಾನ ಅಣ್ವಸ್ತ್ರ ದಾಳಿ ನಡೆಸುವ ಬೆದರಿಕೆ ಒಡ್ಡಿದಾಗ ವಿ. ಪಿ. ಸಿಂಗ್ ಸರಕಾರ ಅದರದೇ ಭಾಷೆಯಲ್ಲಿ ಪ್ರತ್ಯುತ್ತರ ನೀಡಿ ಅಲ್ಲಿನ ಯುದ್ಧೋತ್ಸಾಹಿಗಳನ್ನು ತಣ್ಣಗಾಗಿಸಿದ್ದು ಈಗ ಇತಿಹಾಸ.*

*ಇಷ್ಟಾಗಿಯೂ, ಪಾಕಿಸ್ತಾನ ಅಣ್ವಸ್ತ್ರ ಗಳಿಸಿಕೊಳ್ಳಲು ಇಂದಿರಾ ಅವಕಾಶ ನೀಡಬಾರದಾಗಿತ್ತು. ಕಾಶ್ಮೀರದಲ್ಲಿ ಪಾಕ್ ಪ್ರಚೋದಿತ ಭಯೋತ್ಪಾದನೆ ಅವ್ಯಾಹತವಾಗಿ ಸಾಗುತ್ತಿರುವುದಕ್ಕೆ ಇಸ್ಲಾಮಾಬಾದ್ ಅಣ್ವಸ್ತ್ರಗಳನ್ನು ಗಳಿಸಿಕೊಂಡದ್ದೇ ಕಾರಣ. ಪಾಕ್ ಆಕ್ರಮಿತ ಕಾಶ್ಮೀರದಲ್ಲಿನ

ಭಯೋತ್ಪಾದನಾ ತರಬೇತಿ ಶಿಬಿರಗಳನ್ನು ನಾಶಪಡಿಸಲು ಭಾರತೀಯ ಸೇನೆ ಯಾವಾಗ ಪ್ರಯತ್ನಿಸಿದರೂ ಪಾಕಿಸ್ತಾನ ಅಣ್ವಸ್ತ್ರಗಳನ್ನು ಝುಳಪಿಸಿ ಹಿಮ್ಮೆಟ್ಟಿಸುತ್ತಿದೆ. ಪಾಕಿಸ್ತಾನದ ರಿಯಾಕ್ಟರ್‌ಗಳನ್ನು ನಾಶಪಡಿಸುವ ಸಾಮರ್ಥ್ಯ ನಮ್ಮ ವಾಯುಪಡೆಗಿತ್ತು. ಕೊನೇಪಕ್ಷ ಇಸ್ರೇಲೀಯರು ಅಂತಹ ಯೋಜನೆ ರೂಪಿಸಿ ನಮ್ಮ ಸಹಕಾರ ಕೇಳಿದಾಗಲಾದರೂ ಇಂದಿರಾ ಮುಂದುವರಿಯಬೇಕಾಗಿತ್ತು. ಅವರು ಹಾಗೇಕೆ ಮಾಡಲಿಲ್ಲ ಎಂಬುದು ಉತ್ತರಿಸಲಾಗದ ಪ್ರಶ್ನೆ. ಇಂದಿರಾ ಹತ್ಯೆಗೆ ನಾಲ್ಕು ತಿಂಗಳು ಮೊದಲು ಅವರನ್ನು ಸಂದರ್ಶಿಸಿದ ಪಾಕಿಸ್ತಾನಿ ಪತ್ರಕರ್ತ ತಾರಿಖ್ ಆಲಿ ಕುತೂಹಲಕರ ಮಾಹಿತಿಯೊಂದನ್ನು ನೀಡುತ್ತಾರೆ. ಸಂಭಾಷಣೆಯ ನಡುವೆ ಇಂದಿರಾ '...ಪಾಕ್ ರಿಯಾಕ್ಟರ್‌ಗಳನ್ನು ನಾಶಪಡಿಸಲು ನಮಗೆ ಇಸ್ರೇಲೀಯರ ಸಹಕಾರ ಬೇಕಿಲ್ಲ. ನಮಗೆ ಅಗತ್ಯವೆನಿಸಿದಾಗ ನಾವೇ ಅದನ್ನು ಮಾಡುತ್ತೇವೆ' ಎಂದಿದ್ದರಂತೆ.*

*ಚೀನಾ ಬಗ್ಗೆ ಇಂದಿರಾರ ನೀತಿಯ ಬಗ್ಗೆ ಇಲ್ಲಿ ಉಲ್ಲೇಖಿಸಲೇಬೇಕು. 1967ರ ಅಕ್ಟೋಬರ್‌ನಲ್ಲಿ ಸಿಕ್ಕಿಂ ಗಡಿಯಲ್ಲಿ ಎರಡು ಸಲ ಅತಿಕ್ರಮಣಗೈದ ಚೀನೀ ಸೇನೆಯನ್ನು ನಮ್ಮ ಸೇನೆ ಎರಡು ಸಲವೂ ಬಡಿದೋಡಿಸಿತು. ಅಷ್ಟೇ ಅಲ್ಲ, ನಮ್ಮ ಗಡಿಯನ್ನು ಮೂರು ಕಿಲೋಮೀಟರ್‌ಗಳಷ್ಟು ದೂರಕ್ಕೆ ವಿಸ್ತರಿಸಿತು. ಇದು ಸಾಧ್ಯವಾದದ್ದು ಇಂದಿರಾ ಪ್ರೋತ್ಸಾಹಿಸಿದ್ದರಿಂದ. ಹಾಗೆ ಮಾಡುವ ಮೂಲಕ ತನ್ನ ತಂದೆಯ ಮೂರ್ಖತನದಿಂದಾಗಿ ಅನುಭವಿಸಿದ್ದ ಸೋಲಿನ ಅವಮಾನದ ಒಂದು ಭಾಗವನ್ನಾದರೂ ಇಂದಿರಾ ತೊಡೆದುಹಾಕಿದರು.*

*ದೇಶದ ಹಿತಾಸಕ್ತಿಗಾಗಿ ಇಂದಿರಾ ಯುದ್ಧಗಳ ಹಾದಿಯನ್ನಷ್ಟೇ ಹಿಡಿಯಲಿಲ್ಲ, ಸಮಯ ಸರಿಯೆನಿಸಿದಾಗ ಶಾಂತಿಯ ಮಾರ್ಗದಲ್ಲೂ ಹೆಜ್ಜೆಯಿಟ್ಟರು. ಚೀನಾ ವಿರುದ್ಧ ನಮ್ಮ ಶಕ್ತಿಸಾಮರ್ಥ್ಯಗಳು ವೃದ್ಧಿಗೊಂಡಾಗ ಗಡಿಸಮಸ್ಯೆಯ ಪರಿಹಾರಕ್ಕಾಗಿ ಆ ದೇಶದ ಜತೆ 1980ರಲ್ಲಿ ಮಾತುಕತೆಯ ಸರಣಿಯನ್ನೂ ಆರಂಭಿಸಿದರು.*

*ಇಂದಿರಾರ ಆಂತರಿಕ ನೀತಿಗಳನ್ನು ಚರ್ಚೆಗೆತ್ತಿಕೊಳ್ಳುವುದಾದರೆ ಖಲಿಸ್ತಾನ್ ಸಮಸ್ಯೆಯನ್ನು ನಿಭಾಯಿಸಿದ ಬಗೆಯಿಂದಲೇ ಆರಂಭಿಸಬಹುದು. ಪಂಜಾಬ್‌ನಲ್ಲಿ ಉಗ್ರವಾದಿ ಜರ್ನೈಲ್ ಸಿಂಗ್ ಭಿಂದ್ರಾಂವಾಲೆಯನ್ನು ಎತ್ತಿಕಟ್ಟಿದ್ದೇ ಇಂದಿರಾ ಎಂದು ಹಲವರು ಹೇಳುತ್ತಾ ಬಂದಿದ್ದಾರೆ. ಆದರೆ ಈ ಆಪಾದನೆ ವಸ್ತುನಿಷ್ಠ ತರ್ಕಕ್ಕೆ ವಿರುದ್ಧವಾದುದು. ಪಂಜಾಬ್‌ನಲ್ಲಿ ಕಾಂಗ್ರೆಸ್‌ಗೆ ಪ್ರಬಲ ಪ್ರತಿಸ್ಪರ್ಧಿಯಾಗಿ ಬೆಳೆದು ನಿಂತಿದ್ದ ಅಕಾಲಿ ದಳದ ಶಕ್ತಿಯನ್ನು ಕುಂದಿಸುವುದು ಕಾಂಗ್ರೆಸ್ ನಾಯಕಿಯಾಗಿ ಇಂದಿರಾಗೆ ಅಗತ್ಯವಾಗಿತ್ತು. ಅಕಾಲಿ ನಾಯಕತ್ವಕ್ಕೆ ತಲೆಬಾಗದೇ ಇದ್ದ ಭಿಂದ್ರಾಂವಾಲೇ ಎಂಬ ಯುವ ಅಕಾಲಿಯನ್ನು ಈ ವಿಷಯದಲ್ಲಿ ಉಪಯೋಗಿಸಿಕೊಳ್ಳಲು ಇಂದಿರಾ ಬಯಸಿದ್ದರಲ್ಲಿ ಅಸಹಜತೆಯೇನೂ ಇಲ್ಲ. ಅಕಾಲಿಗಳ ವಿರುದ್ಧ ಭಿಂದ್ರಾಂವಾಲೇಯನ್ನು ಇಂದಿರಾ ಎತ್ತಿಕಟ್ಟುವಾಗ ಈತ ಮುಂದೊಮ್ಮೆ ರಾಷ್ಟ್ರವಿರೋಧಿಯಾಗಿ ಬೆಳೆದು ನಿಲ್ಲುತ್ತಾನೆಂದು ಯಾರೂ ಊಹಿಸಿರಲಿಲ್ಲ. ಎಲ್ಲರ ಊಹೆಗಳನ್ನೂ ಮೀರಿ ಆತ ಯಾವಾಗ ಉಗ್ರ ರಾಷ್ಟ್ರವಿರೋಧಿ ಭಯೋತ್ಪಾದಕ ಕೃತ್ಯಗಳಲ್ಲಿ ತೊಡಗಿದನೋ ಆಗ ಅವನನ್ನು ನಿರ್ವೀರ್ಯಗೊಳಿಸುವ ಪ್ರಯತ್ನಗಳನ್ನು ಇಂದಿರಾ ಕೈಗೊಂಡರು. ಭಯೋತ್ಪಾದಕರನ್ನು ಮಣಿಸುವ ಸೀಮಿತ ಕಾರ್ಯತಂತ್ರಗಳು ವಿಫಲವಾದಾಗ ಅವರನ್ನು ನೇರವಾಗಿ ಎದುರಿಸುವ ಯೋಜನೆಯನ್ನು ಇಂದಿರಾ ರೂಪಿಸಿದರು. ಸ್ವರ್ಣಮಂದಿರದಲ್ಲಿನ ಭಯೋತ್ಪಾದಕರ ಅಡಗುದಾಣವನ್ನು ನಾಶಪಡಿಸದೇ ಖಲಿಸ್ತಾನೀ ಭಯೋತ್ಪಾದನೆಯನ್ನು ಅಡಗಿಸಲು ಸಾಧ್ಯವಿಲ್ಲ ಎಂದರಿತ ಭಾರತೀಯ ಸೇನೆ, ಜೂನ್ 3-4, 1984ರಂದು ಕಾರ್ಯಾಚರಣೆ ಕೈಗೊಂಡಿತು.*

*ಇತರ ಆಂತರಿಕ ವ್ಯವಹಾರಗಳಲ್ಲಿ ಇಂದಿರಾ ತೋರಿದ ಧೀಮಂತಿಕೆ ಸಹಾ ಗಮನಾರ್ಹ. ರಾಜಧನದ ರದ್ದತಿ, ಕೆಲವೇ ಪರಿವಾರಗಳ ಸೊತ್ತಾಗಿದ್ದ ಬ್ಯಾಂಕುಗಳ ರಾಷ್ಟ್ರೀಕರಣಗಳನ್ನು ಕೈಗೊಂಡ ಬಗೆ ಮೈಲಿಗಲ್ಲುಗಳು. ಆದರೆ ತುರ್ತಪರಿಸ್ಥಿತಿಯನ್ನು ಹೇರಿದ್ದು ಮಾತ್ರ ಇಂದಿರಾ ಆಡಳಿತದ ಕಪ್ಪುಚುಕ್ಕೆ. ಲೋಕಸಭೆಗೆ ಆಕೆಯ ಆಯ್ಕೆಯನ್ನು ರದ್ದುಗೊಳಿಸಿ ಅಲಹಾಬಾದ್ ಹೈಕೋರ್ಟ್ ನೀಡಿದ ತೀರ್ಪಿನ ವಿರುದ್ಧ ಅವರು, ತುರ್ತು ಪರಿಸ್ಥಿತಿಯ ಮೊರೆಹೋಗದೇ, ಸುಪ್ರೀಂ ಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಬಹುದಾಗಿತ್ತು. ಆದಾಗ್ಯೂ, 1977ರ ಚುನಾವಣೆಯಲ್ಲಿ ಅಧಿಕಾರಕ್ಕೆ ಬಂದ ಜನತಾ ಪರಿವಾರದ ಪ್ರಮುಖರ ಮೈತ್ರಿ ಎರಡೂವರೆ ವರ್ಷಗಳಷ್ಟೂ ಬಾಳಲಿಲ್ಲ. ಮುಂದಿನ ಚುನಾವಣೆಯಲ್ಲಿ ಸಹಜವಾಗಿಯೇ ಜನತೆ ಇಂದಿರಾ ಗಾಂಧಿಯವರ ಪರವಾಗಿ ಮತ ಚಲಾಯಿಸಿದರು. ಮಹಿಳೆ ಎಂಬ ಕಾರಣಕ್ಕಷ್ಟೇ ಅವರನ್ನು ನಿಕಷ್ಟವಾಗಿ ಕಂಡ ಹಲವಾರು ಉದಾಹರಣೆಗಳು ನಮ್ಮ ಸಾಮಾಜಿಕ ಹಾಗೂ ರಾಜಕೀಯ ವಲಯಗಳಲ್ಲಿವೆ. ಅವರು ಪ್ರಧಾನಮಂತ್ರಿಯಾದಾಗ ಬೇವಾ ಪ್ರಧಾನ್‌ಮಂತ್ರಿ ಬನ್ ಗಯೀ ಎಂದು ಸಂಪ್ರದಾಯಸ್ಥರು ಗೋಳಾಡಿದ್ದುಂಟು. ಇನ್ನು ಅವರ ಚಾರಿತ್ರ್ಯವಧೆಗೂ ಲೆಕ್ಕವಿಲ್ಲದಷ್ಟು ಪ್ರಯತ್ನಗಳು ನಡೆದದ್ದೂ ಇದೆ. ಇಂದಿರಾರ ಎಲ್ಲ ನಡೆಗಳಲ್ಲೂ ತಪ್ಪುಗಳನ್ನೇ ಹುಡುಕುವವರು ಈರುಳ್ಳಿಯ ಸಿಪ್ಪೆಗೂ, ಪದರಗಳಿಗೂ ವ್ಯತ್ಯಾಸವನ್ನು ಅರಿಯಲಾರದಂಥವರು. ಪದರಗಳನ್ನೂ ಸಿಪ್ಪೆಯೆಂದೇ ತಿಳಿದು ಬಿಡಿಸುತ್ತಾ ಹೋಗುವ ಅವರ ಕೈಯಲ್ಲಿ ಕೊನೆಯಲ್ಲಿ ಏನೂ ಉಳಿದಿರುವುದಿಲ್ಲ.*

## ದಲ್ವೀರ್ ಭಂಡಾರಿ

ನಮ್ಮ ದೇಶ 'ವಿಶ್ವಗುರು'ವಾಗಬೇಕು ಎಂಬ ಭಾವನೆ ಪ್ರತಿಯೊಬ್ಬ ರಾಷ್ಟ್ರೀಯವಾದಿ ಭಾರತೀಯನದ್ದು. ಅಂತಹ ಪ್ರಭಾವಿ ದೇಶವಾಗಿ ಭಾರತ ಬದಲಾಗುತ್ತಿದೆ ಎಂಬ ಭಾವನೆ ಮೂಡಿಸಿದ್ದು ಕಳೆದ ಕೆಲವು ದಿನಗಳಲ್ಲಿ ನಡೆದ ಬೆಳವಣಿಗೆಗಳು- ಮೂಡಿ'ಸ್ ರೇಟಿಂಗ್, ವಿಶ್ವ ಬ್ಯಾಂಕ್ ಉದ್ಯಮಸ್ನೇಹಿ ರ್ಯಾಂಕಿಂಗ್, ಭಯೋತ್ಪಾದನೆ ವಿಚಾರದಲ್ಲಿ ಪಾಕ್ ವಿರುದ್ಧ ಕಠಿಣ ನಿಲುವು ಅಮೆರಿಕ ತೆಗೆದುಕೊಳ್ಳುವಂತಾಗಿದ್ದು ಹೀಗೆ ಪಟ್ಟಿ ಬೆಳೆಯುತ್ತದೆ. ಕಳೆದ ವಾರದ ಬೆಳವಣಿಗೆಯಲ್ಲಿ ಗಮನಾರ್ಹವಾದುದು ಇಂಟರ್‌ನ್ಯಾಷನಲ್ ಕೋರ್ಟ್ ಆಫ್ ಜಸ್ಟೀಸ್ (ಐಸಿಜೆ)ನ 15ನೇ ನ್ಯಾಯಮೂರ್ತಿ ನೇಮಕಕ್ಕೆ ನಡೆದ ಚುನಾವಣೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಕಾಯಂ ಸದಸ್ಯ ರಾಷ್ಟ್ರವೊಂದು ಸಾಮಾನ್ಯ ಸದಸ್ಯ ರಾಷ್ಟ್ರದ ರಾಜತಾಂತ್ರಿಕ ಪ್ರಭಾವದೆದುರು ತಲೆಬಾಗಿದ್ದು ಕೂಡ ಇದೇ ಮೊದಲು. ಕೊನೇ ಹಂತದ ಚುನಾವಣೆಯಲ್ಲಿ ಬ್ರಿಟನ್ ತನ್ನ ಅಭ್ಯರ್ಥಿ ಕ್ರಿಸ್ಟೋಫರ್ ಗ್ರೀನ್‌ವುಡ್‌ರನ್ನು ಕಣದಿಂದ ಹಿಂದೆಸರಿಸಿದ್ದರ ಪರಿಣಾಮ, ಐಸಿಜೆಯ 15ನೇ ನ್ಯಾಯಮೂರ್ತಿಯಾಗಿ ನ್ಯಾಯಮೂರ್ತಿ ದಲ್ವೀರ್ ಭಂಡಾರಿ ಅವಿರೋಧವಾಗಿ ಮರುನೇಮಕವಾಗಿದ್ದಾರೆ.(ವಿಶ್ವಸಂಸ್ಥೆಯ ಸ್ವರೂಪ, ಐಸಿಜೆ ಕಾರ್ಯವೈಖರಿ ಇತ್ಯಾದಿಗಳ ಬಗ್ಗೆ ಹಿರಿಯ ನ್ಯಾಯವಾದಿ ಸಜನ್ ಪೂವಯ್ಯ ತಮ್ಮ ಅಂಕಣ(ನ.23,24)ದಲ್ಲಿ ವಿವರಿಸಿದ್ದಾರೆ.) ಅವರ ಈ ಗೆಲುವಿನ ಹಿಂದೆ ಕೆಲಸ ಮಾಡಿದ್ದು ಕೇಂದ್ರ ಸರ್ಕಾರ, ವಿಶೇಷವಾಗಿ ವಿದೇಶಾಂಗ ಸಚಿವಾಲಯ. ಅದರಲ್ಲೂ ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್. ಭಾರತದ ನಿವೃತ್ತ ಸೇನಾ ಸಿಬ್ಬಂದಿ ಕುಲಭೂಷಣ್ ಜಾಧವ್ ಅವರನ್ನು ಅಕ್ರಮವಾಗಿ ಬಂಧಿಸಿದ ಪಾಕಿಸ್ತಾನ, ಅವರಿಗೆ ಕಾನೂನು ಬಾಹಿರವಾಗಿ ಮರಣದಂಡನೆ ವಿಧಿಸಿದ ಪ್ರಕರಣ ಇದೇ ಐಸಿಜೆಯಲ್ಲಿ ವಿಚಾರಣೆಯಲ್ಲಿದೆ. ಹೀಗಾಗಿ, ಅಲ್ಲಿ ಪ್ರಾತಿನಿಧ್ಯ ಕಾಯ್ದುಕೊಳ್ಳುವ ಅನಿವಾರ್ಯತೆ ಭಾರತದ ಎದುರಿಗಿತ್ತು.

ಈ ಚುನಾವಣಾ ಗೆಲುವಿನ ಬಳಿಕ ಅವರು,‘ ಐಸಿಜೆಯಲ್ಲಿ ಖಾಲಿ ಇದ್ದ ಸ್ಥಾನಕ್ಕೆ ಕಳೆದ ಅವಧಿಗೆ ನಾನು ನೇರವಾಗಿ ನಿಯೋಜಿಸಲ್ಪಟ್ಟಿದ್ದೆ. ಇದೇ ಮೊದಲ ಸಲ ಕುತೂಹಲ ಕೆರಳಿಸುವಂತಹ ಚುನಾವಣೆಯಲ್ಲಿ ಭಾಗಿಯಾಗುವ ಸೌಭಾಗ್ಯ ನನ್ನದಾಯಿತು’ ಎಂದಿರುವುದು ಅಲ್ಲಿನ ಬೆಳವಣಿಗೆಯ ರೋಚಕತೆ ಹಾಗೆಯೇ ಮಹತ್ವವನ್ನು ಬಿಂಬಿಸುತ್ತದೆ. ಹೇಗ್‌ನಲ್ಲಿರುವ ಐಸಿಜೆಯಲ್ಲಿ ಭಾರತದ ಪ್ರತಿನಿಧಿಯಾಗಿ ಮುಂದುವರಿಯಲು ನ್ಯಾ.ದಲ್ವೀರ್ ಭಂಡಾರಿ ಹೆಸರನ್ನು ಕಳೆದ ಜೂನ್ ತಿಂಗಳಲ್ಲಿ ನಾಮನಿರ್ದೇಶನ ಮಾಡಿತ್ತು ಸರ್ಕಾರ. ಅವರ ಮೊದಲ ಅವಧಿ 2018ರ ಫೆ.5ರಂದು ಮುಕ್ತಾಯವಾಗಲಿದ್ದು, ಅಲ್ಲಿಂದ ಒಂಭತ್ತು ವರ್ಷ 2ನೇ ಅವಧಿ ಆರಂಭವಾಗುತ್ತದೆ. ಭಂಡಾರಿ ವಕೀಲಿಕೆಯ ಕುಟುಂಬದಿಂದಲೇ ಬಂದವರು. 1947ರ ಅ.1ರಂದು ಜನಿಸಿದ ಭಂಡಾರಿಯವರ ತಂದೆ ಮಹಾವೀರ ಚಾಂದ್ ಭಂಡಾರಿ. ಅಜ್ಜ ಬಿ.ಸಿ.ಭಂಡಾರಿ. ಅವರಿಬ್ಬರೂ ರಾಜಸ್ಥಾನದಲ್ಲಿ ವಕೀಲಿಕೆ ಮಾಡಿದವರು. ಜೋಧಪುರ ವಿಶ್ವವಿದ್ಯಾಲಯದಲ್ಲಿ ಕಾನೂನು ಪದವಿ ಪಡೆದ ದಲ್ವೀರ್, 1968-70ರ ತನಕ ರಾಜಸ್ಥಾನ ಹೈಕೋರ್ಟ್‌ನಲ್ಲಿ ವಕೀಲಿಕೆ ಮಾಡಿದ್ದರು. 1970ರ ಜೂನ್‌ನಲ್ಲಿ ಷಿಕಾಗೋದಲ್ಲಿನ ಯೂನಿವರ್ಸಿಟಿ ಆಫ್ ಷಿಕಾಗೋ ಆಯೋಜಿಸಿದ್ದ ‘ಭಾರತೀಯ ಕಾನೂನಿನ ಮೇಲಿನ ಸಂಶೋಧನೆ’ ಕುರಿತ ಆರು ವಾರಗಳ ಕಾರ್ಯಾಗಾರದಲ್ಲಿ ಪಾಲ್ಗೊಳ್ಳುವಂತೆ ಭಂಡಾರಿಯವರಿಗೂ ಆಹ್ವಾನ ಸಿಕ್ಕಿತ್ತು. ಇದೇ ಅವಧಿಯಲ್ಲಿ ಅವರು ‘ನಾರ್ತ್‌ವೆಸ್ಟರ್ನ್

ಯೂನಿವರ್ಸಿಟಿ ಸ್ಕೂಲ್ ಆಫ್ ಲಾ’ದಲ್ಲಿ ಅಂತಾರಾಷ್ಟ್ರೀಯ ವಿದ್ಯಾರ್ಥಿ ವೇತನದೊಂದಿಗೆ ಕಾನೂನು ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನೂ ಪಡೆದರು. ಅಲ್ಲದೆ, ಷಿಕಾಗೋ ಕೋರ್ಟ್‌ಗಳಲ್ಲಿ ನಾರ್ತ್‌ವೆಸ್ಟರ್ನ್ ಲೀಗಲ್ ಅಸಿಸ್ಟೆನ್ಸ್ ಕ್ಲಿನಿಕ್ ಪ್ರತಿನಿಧಿಯಾಗಿ ವಿವಿಧ ಪ್ರಕರಣಗಳಲ್ಲಿ ವಾದ ಮಂಡಿಸಿದರು. ಹಾಗೆಯೇ, ಸೆಂಟರ್ ಫಾರ್ ರೀಸರ್ಚ್‌ನಲ್ಲೂ ಕೆಲಸ ಮಾಡಿದ್ದರು. 1973ರ ಜೂನ್‌ನಲ್ಲಿ ಅಂತಾರಾಷ್ಟ್ರೀಯ ಫೆಲೋಷಿಪ್ ಪಡೆದ ಅವರು, ಥಾಯ್ಲೆಂಡ್, ಮಲೇಷ್ಯಾ, ಇಂಡೋನೇಷ್ಯಾ, ಸಿಂಗಾಪುರ, ಶ್ರೀಲಂಕಾಕ್ಕೆ ವೀಕ್ಷಕ/ಉಪನ್ಯಾಸಕನಾಗಿ ವಿವಿಧ ಕಾನೂನು ವಿಶ್ವವಿದ್ಯಾಲಯ, ಕಾಲೇಜುಗಳಿಗೆ ಭೇಟಿ ನೀಡಿದರು. ವಿಶ್ವಸಂಸ್ಥೆಯ ‘ಡಿಲೇ ಇನ್ ದ ಅಡ್ಮಿನಿಸ್ಟ್ರೇಷನ್ ಆಫ್ ಕ್ರಿಮಿನಲ್ ಜಸ್ಟೀಸ್ ಇನ್ ಇಂಡಿಯಾ’ ಎಂಬ ವಿಷಯದ ಪ್ರಾಜೆಕ್ಟ್‌ಗಾಗಿ ಕೆಲಸ ಮಾಡಿದ್ದರು.

ಅಮೆರಿಕದಿಂದ ಅಧ್ಯಯನ ಮುಗಿಸಿ ಭಾರತಕ್ಕೆ ಹಿಂತಿರುಗಿದ ಭಂಡಾರಿಯವರು 1973ರಿಂದ 1976ರ ತನಕ ರಾಜಸ್ಥಾನ ಹೈಕೋರ್ಟ್‌ನಲ್ಲಿ ವಕೀಲರಾಗಿ ಕೆಲಸ ಮಾಡಿದರು. ನಂತರ 1977ರಲ್ಲಿ ದೆಹಲಿಗೆ ಸ್ಥಳಾಂತರಗೊಂಡ ಅವರು, ಸುಪ್ರೀಂ ಕೋರ್ಟ್‌ನಲ್ಲಿ ನ್ಯಾಯವಾದಿಯಾದರು. 23 ವರ್ಷಗಳ ವಕೀಲಿಕೆ ಬಳಿಕ 1991ರಲ್ಲಿ ದೆಹಲಿ ಹೈಕೋರ್ಟ್‌ನ ನ್ಯಾಯಮೂರ್ತಿಯಾಗಿ ನಿಯೋಜಿತರಾದರು. ಅದಾಗಿ, ಬಾಂಬೆ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿಯಾಗಿ ನೇಮಕವಾದ ಅವರು 2005ರ ಅಕ್ಟೋಬರ್‌ನಲ್ಲಿ ಸುಪ್ರೀಂ ಕೋರ್ಟ್‌ಗೆ ಬಡ್ತಿ ಪಡೆದರು. ಅಲ್ಲಿ ಏಳು ವರ್ಷಗಳ ಸೇವೆ ಬಳಿಕ, 2012ರ ಜೂನ್ 19ರಂದು ಐಸಿಜೆಯಲ್ಲಿ ಭಾರತದ ಪ್ರತಿನಿಧಿಯಾಗಿ ನಿಯೋಜಿತರಾದರು. 2014ರಲ್ಲಿ ಭಂಡಾರಿಯವರಿಗೆ ಪದ್ಮಭೂಷಣ ಪುರಸ್ಕಾರದ ಗರಿ ಒದಗಿತು. ಕಾನೂನು ಕ್ಷೇತ್ರಕ್ಕೆ ಅವರು ಸಲ್ಲಿಸಿದ ಅತ್ಯಮೂಲ್ಯ ಸೇವೆಯನ್ನು

ಪರಿಗಣಿಸಿ, ಕರ್ನಾಟಕದ ತುಮಕೂರು ವಿಶ್ವವಿದ್ಯಾಲಯ ನ್ಯಾ.ಭಂಡಾರಿಯವರಿಗೆ ಗೌರವ ಡಾಕ್ಟರೇಟ್ ನೀಡಿದೆ.ಭಂಡಾರಿಯವರು 1994ರಿಂದಲೇ ಇಂಟರ್‌ನ್ಯಾಷನಲ್ ಲಾ ಅಸೋಸಿಯೇಷನ್‌ನ ಇಂಡಿಯಾ ಚಾಪ್ಟರ್‌ನ ಕಾರ್ಯಕಾರಿ ಸದಸ್ಯರಾಗಿದ್ದರು. ಅಲ್ಲದೆ, 2007ರಲ್ಲಿ ಇಂಡಿಯಾ ಇಂಟರ್‌ನ್ಯಾಷನಲ್ ಲಾ ಫೌಂಡೇಷನ್‌ನ ಚುನಾಯಿತ ಅಧ್ಯಕ್ಷರಾಗಿದ್ದು, ಈಗಲೂ ಮುಂದುವರಿದಿದ್ದಾರೆ. ಅವರ ವೈಯಕ್ತಿಕ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ, ಸಾಂವಿಧಾನಿಕ ಕಾನೂನು, ಅಪರಾಧ ಕಾನೂನು, ನಾಗರಿಕ ನೀತಿ ಸಂಹಿತೆ, ಆಡಳಿತ ಕಾನೂನು, ಮಧ್ಯಸ್ಥಿಕೆ ಕಾನೂನು, ವಿಮೆ, ಬ್ಯಾಂಕಿಂಗ್ ಮತ್ತು ಕೌಟುಂಬಿಕ ಕಾನೂನು ಮುಂತಾದ ವಿಷಯಗಳಲ್ಲಿ ಪರಿಣತರು ಅವರು. ನ್ಯಾಯಮೂರ್ತಿಯಾಗಿ ಅವರು ನೀಡಿದ ಹಲವು ಐತಿಹಾಸಿಕ ತೀರ್ಪುಗಳ ಪರಿಣಾಮ ಸರ್ಕಾರ ಕೆಲವು ಕಾನೂನುಗಳನ್ನು ಪರಿಷ್ಕರಿಸಬೇಕಾಗಿ ಬಂದಿದೆ. ವಿಶೇಷವಾಗಿ ಒಂದು ವಿಚ್ಛೇದನ ಪ್ರಕರಣದಲ್ಲಿ ಅವರು ನೀಡಿದ ತೀರ್ಪಿನ ಪರಿಣಾಮ ಕೇಂದ್ರ ಸರ್ಕಾರ ಹಿಂದು ವಿವಾಹ ಕಾಯ್ದೆ 1965ರಲ್ಲಿ ತಿದ್ದುಪಡಿ ತರಬೇಕಾಯಿತು. ಆಹಾರ ಧಾನ್ಯಗಳ ಹಂಚಿಕೆ ಕುರಿತ ತೀರ್ಪಿನ ಪರಿಣಾಮ ದೇಶಾದ್ಯಂತ ಬಡತನ ರೇಖೆಗಿಂತ ಕೆಳಗಿರುವ ವ್ಯಕ್ತಿಗಳಿಗೆ ವಿತರಿಸುವ ಆಹಾರ ಧಾನ್ಯದ ಪ್ರಮಾಣವನ್ನು ಸರ್ಕಾರ ಹೆಚ್ಚಿಸಬೇಕಾಯಿತು. ನಿರ್ಗತಿಕರಿಗೆ ರಾತ್ರಿ ವಾಸ್ತವ್ಯಕ್ಕೆ ಅಗತ್ಯ ಸೂರು ಒದಗಿಸುವ ಕೆಲಸವನ್ನು ಮಾಡುವಂತೆ ಸರ್ಕಾರಕ್ಕೆ ನಿರ್ದೇಶನ ನೀಡಿದ ಕೀರ್ತಿಯೂ ಭಂಡಾರಿಯವರದ್ದು. ಇನ್ನೂ ಪ್ರಮುಖ ತೀರ್ಪು ಎಂದರೆ, ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಹಕ್ಕಿನ ಕುರಿತಾಗಿ ನೀಡಿದ್ದು. ಇದರ ಪರಿಣಾಮ, ಸರ್ಕಾರ ದೇಶದ ಎಲ್ಲ ಪ್ರಾಥಮಿಕ ಮತ್ತು ಸೆಕಂಡರಿ ಸ್ಕೂಲ್‌ಗಳಲ್ಲಿ ಅಗತ್ಯ ಮೂಲಸೌಕರ್ಯ ಒದಗಿಸುವ ಹೊಣೆಗಾರಿಕೆಯನ್ನು ಇನ್ನಷ್ಟು ಪರಿಣಾಮಕಾರಿಯಾಗಿ ನಿಭಾಯಿಸಬೇಕಾಯಿತು. ಐಸಿಜೆಯಲ್ಲಿನ ಅವರ ಗೆಲುವು ಜಾಗತಿಕ ಮಟ್ಟದಲ್ಲಿ ಹಲವು ವಿಚಾರಗಳಿಗಾಗಿ ಪ್ರಾಮುಖ್ಯತೆ ಪಡೆದುಕೊಂಡಿವೆ. ವಿಶ್ವಸಂಸ್ಥೆಯ ವ್ಯವಸ್ಥೆಯಲ್ಲಿ ಸುಧಾರಣೆ ಆಗಬೇಕು ಎಂಬ ಭಾರತದ ಆಗ್ರಹಕ್ಕೆ ಈ ಗೆಲುವು ಪುಷ್ಟಿ ನೀಡಿದೆ. ಆದರೆ, ಅದಕ್ಕೆ ಇನ್ನೂ ಕಾಯಂ ಸದಸ್ಯ ರಾಷ್ಟ್ರಗಳ ಬೆಂಬಲ ಸಿಕ್ಕಿಲ್ಲ. ಈಗ ಮುಖ್ಯವಾಗಿ, ಕುಲಭೂಷಣ್ ಜಾಧವ್ ಪ್ರಕರಣದಲ್ಲಿ ನ್ಯಾ.ಭಂಡಾರಿ ಹೊಣೆಗಾರಿಕೆಯನ್ನು ಹೇಗೆ ನಿರ್ವಹಿಸಲಿದ್ದಾರೆ ಎಂಬುದು ಸದ್ಯದ ಕುತೂಹಲ.

••••• ಮಾಹಿತಿ ವೇದಿಕೆ ••••••••

## ದೀಪಕ್ ಮಿಶ್ರ

=========

ಭಾರತದ ಮುಖ್ಯ ನ್ಯಾಯಮೂರ್ತಿ ಜಗದೀಶ್ ಸಿಂಗ್ ಖೇಹರ್ ತೆರವು ಮಾಡುತ್ತಿರುವ ಸ್ಥಳವನ್ನು ಒಡಿಶಾ ಮೂಲದ ನ್ಯಾ. ದೀಪಕ್ ಮಿಶ್ರಾ (63) ತುಂಬಲಿದ್ದಾರೆ. ದೇಶದ 45ನೇ ಮುಖ್ಯ ನ್ಯಾಯಮೂರ್ತಿಯಾಗಿ 2018ರ ಅಕ್ಟೋಬರ್ 2ರವರೆಗೆ ಕಾರ್ಯನಿರ್ವಹಿಸಲಿರುವ ನ್ಯಾ. ಮಿಶ್ರಾ, ಕಾವೇರಿ ನದಿನೀರು ವಿವಾದಕ್ಕೆ ಯಾವರೀತಿ ಇತಿಶ್ರೀ ಹಾಡಲಿದ್ದಾರೆ ಎಂಬುದು ಸಹಜವಾಗಿಯೇ ಹರಳುಗಟ್ಟಿರುವ ನಿರೀಕ್ಷೆ. ನದಿನೀರು ಹಂಚಿಕೆಯಲ್ಲಿ ದಶಕಗಳಿಂದ ಅನ್ಯಾಯ ಎದುರಿಸುತ್ತಿರುವ ಕರ್ನಾಟಕ, ನ್ಯಾ. ಮಿಶ್ರಾ ಪ್ರಕಟಿಸಲಿರುವ ಅಂತಿಮ ತೀರ್ಪನ್ನು ಭಾರಿ ಕುತೂಹಲದಿಂದ ಎದುರುನೋಡುತ್ತಿರುವುದಂತೂ ಖರೆ. ‘ರಾಜ್ಯದ ವಿಸôತ ವಾದವನ್ನು ತಾಳ್ಮೆಯಿಂದ ಆಲಿಸಿರುವ ನ್ಯಾ. ಮಿಶ್ರಾರಿಗೆ ಕಾವೇರಿ ಕಣಿವೆ ರೈತರ, ನಿವಾಸಿಗರ ಸಮಸ್ಯೆ ಅರ್ಥವಾದಂತಿದೆ’ ಎಂಬ ರಾಜ್ಯ ಪರ ವಕೀಲರ ವಿಶ್ವಾಸದ ಮಾತುಗಳೂ ಇದಕ್ಕೆ ಮತ್ತಷ್ಟು ಇಂಬುಕೊಟ್ಟಿವೆಯೆನ್ನಿ.

ದೀಪಕ್ ಮಿಶ್ರಾ, ಭಾರತದ ಮಾಜಿ ಮುಖ್ಯ ನ್ಯಾಯಮೂರ್ತಿ ರಂಗನಾಥ್ ಮಿಶ್ರಾ ಅವರ ಸೋದರಳಿಯ. ಆಂಗ್ಲ ಸಾಹಿತ್ಯ, ಸಂಸ್ಕೃತ ಭಾಷೆ, ಇತಿಹಾಸ ಶಾಸ್ತ್ರಗಳ ಬಗ್ಗೆ ಅವರಿಗೆ ಎಲ್ಲಿಲ್ಲದ ಆಸಕ್ತಿ, ಪ್ರೀತಿ, ಅಭಿಮಾನ. ತಾವು ಪ್ರಕಟಿಸುವ ಬಹುತೇಕ ತೀರ್ಪುಗಳಲ್ಲಿ ಅವರು ಆಂಗ್ಲ ಕವನಗಳ ಸಾಲುಗಳನ್ನು, ಮುಖ್ಯವಾಗಿ

ಷೇಕ್ಸ್‌ಪಿಯರ್ ಕವನಗಳನ್ನು ದಾಖಲಿಸುವುದುಂಟು. ನೈತಿಕತೆಯ ಪಾಠ ಮಾಡುವಾಗ ಸಂಸ್ಕೃತದ ಶ್ಲೋಕಗಳೂ ತೀರ್ಪಿನೊಳಗೆ ನುಸುಳಿದ ನಿದರ್ಶನಗಳಿವೆ. ಆದರೆ, ಕಲ್ಪನೆಗೂ ನಿಲುಕದ ಇಂಗ್ಲಿಷ್ ಪದ, ವಾಕ್ಯಗಳಿಂದಾಗಿ ತೀರ್ಪಿನಲ್ಲೇನಿದೆ ಎಂಬುದು ಜನಸಾಮಾನ್ಯರಿಗೆ ಅರ್ಥವಾಗದಂತಾದ ಉದಾಹರಣೆಗಳೂ ಉಂಟು. 2015ರಲ್ಲಿ ದುರುದ್ದೇಶಪೂರಿತ ಅರ್ಜಿಯೊಂದನ್ನು ವಜಾಗೊಳಿಸಿದ್ದ ವೇಳೆ 192 ಶಬ್ದದ ವಾಕ್ಯವೊಂದನ್ನು ಬರೆದಿದ್ದ ನ್ಯಾ. ಮಿಶ್ರಾ, ವಕೀಲರನ್ನು ಕಕ್ಕಾಬಿಕ್ಕಿಗೊಳಿಸಿದ್ದರು!

ನ್ಯಾ. ಮಿಶ್ರಾ ಹೆಸರು ಕೇಳಿದಾಕ್ಷಣ ನೆನಪಾಗುವುದು, ಉಗ್ರಗಾಮಿ ಯಾಕೂಬ್ ಮೆಮನ್ ಕುರಿತಾಗಿ ಅವರು ಪ್ರಕಟಿಸಿದ ತೀರ್ಪು. ಮುಂಬೈ ಸರಣಿ ಬಾಂಬ್ ಸ್ಫೋಟ ಪ್ರಕರಣದಲ್ಲಿ ಯಾಕೂಬ್ ಸಲ್ಲಿಸಿದ್ದ ಕ್ಷಮಾದಾನ ಅರ್ಜಿಯನ್ನು ಅಂದಿನ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ತಿರಸ್ಕರಿಸಿದ್ದರು. ಈ ತೀರ್ಮಾನ ಪ್ರಶ್ನಿಸಿ ಸಲ್ಲಿಸಲಾಗಿದ್ದ ಮೇಲ್ಮನವಿ ಅರ್ಜಿಯ ವಿಚಾರಣೆಯನ್ನು ಬೆಳಗ್ಗೆ 10.30ಕ್ಕೆ ಆರಂಭಿಸಿ, ಸಂಜೆ 5 ಗಂಟೆವರೆಗೆ ನಡೆಸಿದ ನ್ಯಾ. ಮಿಶ್ರಾ, ಗಲ್ಲುಶಿಕ್ಷೆ ಜಾರಿಯನ್ನು ಮಾರನೇ ದಿನ ಬೆಳಗ್ಗೆ 7 ಗಂಟೆಗೆ ಖಾತ್ರಿಪಡಿಸಿದ್ದರು. ಆದರೆ ಅದೇ ದಿನ ರಾತ್ರಿ 11ರ ಸುಮಾರಿಗೆ ನಡೆದ ನಾಟಕೀಯ ಬೆಳವಣಿಗೆಯಲ್ಲಿ ಕೆಲ ಮಾನವಹಕ್ಕು ಹೋರಾಟಗಾರ ವಕೀಲರು ಅಂದಿನ ಮುಖ್ಯ ನ್ಯಾಯಮೂರ್ತಿ ಎಚ್.ಎಲ್. ದತ್ತು ನಿವಾಸಕ್ಕೆ ತೆರಳಿ ಗಲ್ಲು ಖಾತ್ರಿಪಡಿಸಿದ ತೀರ್ಪಿನ

ಮರುಪರಿಶೀಲನೆಯಾಗಬೇಕು ಎಂದು ಒತ್ತಾಯಿಸಿದರು. ತನ್ನ ವಾದವನ್ನು ನ್ಯಾಯಾಲಯ ಕೇಳಲಿಲ್ಲ ಎಂಬ ಭಾವನೆ ಎಂದಿಗೂ ಅರ್ಜಿದಾರನಲ್ಲಿ ಮೂಡಬಾರದು ಎಂಬ ಉದ್ದೇಶದಿಂದಲೇ ವಿಚಾರಣೆಗೆ ಒಪ್ಪಿದ ನ್ಯಾ. ಮಿಶ್ರಾ, ಮಧ್ಯರಾತ್ರಿ 2.30ರಿಂದ ಬೆಳಗ್ಗೆ 5ರ ತನಕ ಕೋರ್ಟ್ ಹಾಲ್ ನಂ.4ರಲ್ಲಿ ವಿಚಾರಣೆ ನಡೆಸಿದರು. ಹಾಗಿದ್ದರೂ ಯಾಕೂಬ್ ಮೆಮನ್‌ಗೆ ನೇಣಿನ ಕುಣಿಕೆಯಿಂದ ಪಾರಾಗುವುದು ಸಾಧ್ಯವಾಗಲಿಲ್ಲ. ವಾಸ್ತವದಲ್ಲಿ ನ್ಯಾ. ಮಿಶ್ರಾರಿಂದ ಇಂಥದ್ದೊಂದು ನಡೆಯನ್ನು ಯಾರೂ ಊಹಿಸಿರಲಿಲ್ಲ.

ಯಾಕೂಬ್ ಪ್ರಕರಣದ ವಿಚಾರಣೆ ಮಾಡಬೇಡಿ ಎಂಬ ಜೀವಬೆದರಿಕೆಯನ್ನೂ ಲೆಕ್ಕಿಸದ ನ್ಯಾ. ಮಿಶ್ರಾ, ಕಳೆದ 25 ವರ್ಷಗಳಿಂದ ಕಗ್ಗಂಟಾಗಿರುವ ಅಯೋಧ್ಯೆಯ ರಾಮ ಜನ್ಮಭೂಮಿ ವಿವಾದ ಬಗೆಹರಿಸಲು ಮುಂದಾಗಿದ್ದಾರೆ. ಕೆಲವೇ ದಿನಗಳಲ್ಲಿ ಈ ಪ್ರಕರಣದ ವಿಚಾರಣೆ ಆರಂಭವಾಗಲಿದೆ. ಕ್ಲಿಷ್ಟಕರ ಎನಿಸುವಂತಹ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುವ ನ್ಯಾ. ಮಿಶ್ರಾ, ಅರ್ಜಿದಾರ- ಪ್ರತಿವಾದಿ ಇಬ್ಬರನ್ನೂ ಆದ್ಯತೆಗೆ ತೆಗೆದುಕೊಂಡು, ಬಹಳ ತಾಳ್ಮೆಯಿಂದ ವಾದಗಳನ್ನು ಆಲಿಸುತ್ತಾರೆ. ವಿಚಾರಣೆ ಮಧ್ಯೆ, ಐತಿಹಾಸಿಕ ಕಥನಗಳ ನಿದರ್ಶನಗಳನ್ನು ನೀಡುತ್ತಾ, ವಕೀಲರಲ್ಲೂ ಜ್ಞಾನ ತುಂಬುತ್ತಾರೆ. ಯುವ ವಕೀಲರನ್ನು ಪ್ರೋತ್ಸಾಹಿಸುವ ನ್ಯಾ. ಮಿಶ್ರಾ, ಎಂದಿಗೂ ಸಹನೆ ಕಳೆದುಕೊಳ್ಳುವುದಿಲ್ಲ. ಕೆಲ ವಕೀಲರ ಮೊಂಡುವಾದಕ್ಕೆ ಸಿಟ್ಟಾದರೂ, ಕ್ಷಣಾರ್ಧದಲ್ಲಿ ಸಹಜ ಸ್ಥಿತಿಗೆ ಬರುತ್ತಾರೆ ಎನ್ನುತ್ತಾರೆ ಸುಪ್ರೀಂಕೋರ್ಟ್ ವಕೀಲೆ ಅನಿತಾ ಶೆಣೈ.

ಕಳೆದ ವರ್ಷ ಕಾವೇರಿ ಜಲವಿವಾದ ಪ್ರಕರಣದಲ್ಲಿ ರಾಜ್ಯದ ಜನರು ನ್ಯಾ. ಮಿಶ್ರಾ ವಿರುದ್ಧ ಸಿಟ್ಟಾಗಿದ್ದರು. ತಮಿಳುನಾಡಿಗೆ ನೀರು ಬಿಡುಗಡೆಗೆ ಮಾಡುವಂತೆ ಆದೇಶ ನೀಡಿದ ಪರಿಣಾಮ ರಾಜ್ಯದಲ್ಲಿ ಹಿಂಸಾಚಾರ ಭುಗಿಲೆದ್ದಿತ್ತು. ಸಂಕಷ್ಟ ವರ್ಷದಲ್ಲಿ ನೀರು ಹಂಚಿಕೆ ಹೇಗೆ ಎಂಬ ಮಾರ್ಗದರ್ಶಿ ಸೂತ್ರವನ್ನು ಕಾವೇರಿ ನ್ಯಾಯಾಧಿಕರಣ ಹಾಗೂ ಕೇಂದ್ರ ಸರ್ಕಾರಗಳು ರೂಪಿಸದ ಪರಿಣಾಮ, ನೈಸರ್ಗಿಕ ನ್ಯಾಯದ ಆಧಾರದಲ್ಲಿ ನೀರು ಹಂಚಿಕೆಗೆ ಆದೇಶ ನೀಡುವುದು ಸುಪ್ರೀಂಕೋರ್ಟಿಗೂ ಅನಿವಾರ್ಯವಾಗಿತ್ತು. ಹಾಗಿದ್ದರೂ, ಕೇಂದ್ರ ಸರ್ಕಾರದ ಹಸ್ತಕ್ಷೇಪದಿಂದಾಗಿ ಕಾವೇರಿ ನೀರು ನಿರ್ವಹಣೆ ಮಂಡಳಿ ರಚನೆಗೆ ಆದೇಶ ನೀಡುವುದರಿಂದ ನ್ಯಾ. ಮಿಶ್ರಾ ಹಿಂದೆ ಸರಿದರು. ತರುವಾಯ, 2007ರ ಕಾವೇರಿ ನ್ಯಾಯಾಧಿಕರಣದ ತೀರ್ಪಿನ ವಿಚಾರಣೆ ನಡೆಸುವ ಅಧಿಕಾರ ಸುಪ್ರೀಂಕೋರ್ಟಿಗೆ ಇಲ್ಲ; ಹೀಗಾಗಿ, ತಮಿಳುನಾಡು, ಕರ್ನಾಟಕ ಮತ್ತು ಕೇರಳ ಸಲ್ಲಿಸಿರುವ ಮೇಲ್ಮನವಿ ಅರ್ಜಿಗಳನ್ನು ವಜಾಗೊಳಿಸಬೇಕು ಎಂಬ ಕೇಂದ್ರದ ವಾದ ತಳ್ಳಿಹಾಕಿದ ನ್ಯಾ. ಮಿಶ್ರಾ, ಐತೀರ್ಪಿನ ಕುರಿತು ವಿಚಾರಣೆ ನಡೆಸುತ್ತೇವೆ ಎಂಬ ದಿಟ್ಟನಿಲುವು ಪ್ರಕಟಿಸಿದರು. ಒಂದುವೇಳೆ ಕೇಂದ್ರದ ವಾದವನ್ನೇ ನ್ಯಾಯಪೀಠ ಪುರಸ್ಕರಿಸಿದ್ದಿದ್ದರೆ, ಕಾವೇರಿ ವಿಷಯದಲ್ಲಿ ಅನ್ಯಾಯ ಎಂಬುದು ರಾಜ್ಯಕ್ಕೆ ಶಾಶ್ವತವಾಗಿಬಿಡುತ್ತಿತ್ತು.

1977ರ ಫೆ.14ರಂದು ಅಧಿಕೃತವಾಗಿ ವಕೀಲಿ ವೃತ್ತಿ ಆರಂಭಿಸಿದ ನ್ಯಾ. ಮಿಶ್ರಾ, ಒಡಿಶಾ ಹೈಕೋರ್ಟ್ ಮತ್ತು ಅಲ್ಲಿನ ಸರ್ವೀಸ್ ಟ್ರಿಬ್ಯುನಲ್‌ಗಳಲ್ಲಿ ಕಾನೂನು ಅಭ್ಯಾಸ ಮಾಡುತ್ತಿದ್ದರು. 1996ರಲ್ಲಿ ಒಡಿಶಾ ಹೈಕೋರ್ಟ್‌ನ ಹೆಚ್ಚುವರಿ ನ್ಯಾಯಾಧೀಶರಾಗಿ ನೇಮಕಗೊಂಡಿದ್ದ ಅವರು, 1997ರಲ್ಲಿ ಕಾಯಂ ನ್ಯಾಯಾಧೀಶರಾಗಿ, 2009ರಲ್ಲಿ ಪಟನಾ ಹೈಕೋರ್ಟ್ ಮತ್ತು 2010ರಲ್ಲಿ ದೆಹಲಿ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿಯಾಗಿ ಗಮನಸೆಳೆದರು. 2011ರಿಂದ

ಸುಪ್ರೀಂಕೋರ್ಟ್ ನ್ಯಾಯಮೂರ್ತಿಯಾಗಿರುವ ನ್ಯಾ. ಮಿಶ್ರಾ, 1ರಿಂದ 5ನೇ ತರಗತಿವರೆಗೆ ಕನ್ನಡದಲ್ಲಿ ಕಲಿಕೆ ಕಡ್ಡಾಯ ಎಂಬ ರಾಜ್ಯ ಸರ್ಕಾರದ ನೀತಿಯನ್ನು ರದ್ದುಗೊಳಿಸಿದ್ದ ಸಾಂವಿಧಾನಿಕ ಪೀಠದ ಸದಸ್ಯರಾಗಿ, ತಮ್ಮ ಆಯ್ಕೆಯ ಭಾಷೆಯಲ್ಲಿ ವಿದ್ಯಾಭ್ಯಾಸ ಮಾಡಬೇಕೆಂಬ ಹೆತ್ತವರ/ಮಕ್ಕಳ ಮೂಲಭೂತ ಹಕ್ಕನ್ನು ಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲ ಎಂದು ಸಿದ್ದರಾಮಯ್ಯ ಸರ್ಕಾರಕ್ಕೆ ಕುಟುಕಿದ್ದರು.

ಯಾವುದೇ ಪ್ರಕರಣದಲ್ಲಾಗಲೀ, ಪೊಲೀಸರು ದಾಖಲಿಸಿದ ಎಫ್‌ಐಆರ್‌ಗಳು ವೆಬ್‌ಸೈಟ್‌ನಲ್ಲಿ ಅಪ್‌ಲೋಡ್ ಆಗಬೇಕು ಎಂಬ ನ್ಯಾ. ಮಿಶ್ರಾ ತೀರ್ಪು ಸಾರ್ವಜನಿಕ ಮೆಚ್ಚುಗೆಗೆ ಪಾತ್ರವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ, 2012ರ ನಿರ್ಭಯಾ ಗ್ಯಾಂಗ್‌ರೇಪ್ ಪ್ರಕರಣದಲ್ಲಿ ನಾಲ್ವರು ಅಪರಾಧಿಗಳ ಗಲ್ಲುಶಿಕ್ಷೆ ಎತ್ತಿಹಿಡಿದಿದ್ದ ನ್ಯಾ. ಮಿಶ್ರಾ, 'ಸಂತ್ರಸ್ತ ಯುವತಿಯನ್ನು ಭೋಗದ ವಸ್ತುವಂತೆ ಕಂಡ, ಅಮಾನವೀಯ, ರಾಕ್ಷಸೀ ವರ್ತನೆ ಗಲ್ಲುಶಿಕ್ಷೆಗೆ ಅರ್ಹ' ಎಂದು ಖಂಡತುಂಡವಾಗಿ ಘೋಷಿಸಿದ್ದರು. ಚಲನಚಿತ್ರ ಮಂದಿರಗಳಲ್ಲಿ ಚಿತ್ರ ಪ್ರದರ್ಶನಕ್ಕೆ ಮುನ್ನ ರಾಷ್ಟ್ರಗೀತೆ ಪ್ರಸಾರ ಮಾಡಬೇಕು ಎಂಬ ಅವರ ತೀರ್ಪು ಸಾಕಷ್ಟು ಚರ್ಚೆಗೆ ಗ್ರಾಸವಾದರೂ, ದೇಶದ ಬಹುದೊಡ್ಡ ವರ್ಗ ಈ ತೀರ್ಪನ್ನು ಸ್ವಾಗತಿಸಿದೆ. ಕೋರ್ಟ್ ಆದೇಶಗಳನ್ನು ವಿಚಾರಣೆ ವೇಳೆಯೇ ಡಿಕ್ಟೇಟ್ ಮಾಡುವ ವಿಶಿಷ್ಟ ವ್ಯಕ್ತಿತ್ವದ ನ್ಯಾ. ಮಿಶ್ರಾ, ಮುಂದಿನ ದಿನಗಳಲ್ಲಿ ಕೇಂದ್ರದ ಆಧಾರ್ ಯೋಜನೆ ಹಣೆಬರಹವನ್ನೂ ನಿರ್ಧರಿಸುವ ನ್ಯಾಯಪೀಠದ ನೇತೃತ್ವ ವಹಿಸುವ ಸಾಧ್ಯತೆ ಇದೆ.

••••• ಮಾಹಿತಿ ವೇದಿಕೆ ••••••••

## ರಾಮನಾಥ ಕೋವಿಂದ

===============

ದಲಿತ ನಾಯಕ ರಾಮನಾಥ ಕೋವಿಂದ ಅವರನ್ನು ಎನ್‌ಡಿಎ ಕಣಕ್ಕಿಳಿಸಿದ್ದರಿಂದ ರಾಷ್ಟ್ರಪತಿ ಚುನಾವಣೆ ನಡೆಯದೆ ಒಮ್ಮತದ ಆಯ್ಕೆಯಾಗಬಹುದು ಎಂಬ ಮಾತು ಅಲ್ಲಲ್ಲಿ ಕೇಳಿಬಂದಿತ್ತು. ಆದರೂ ಸೈದ್ಧಾಂತಿಕ ಸಂಘರ್ಷದ ಹಿನ್ನೆಲೆಯಲ್ಲಿ ಯುಪಿಎ ಕೂಡ ದಲಿತ ಮಹಿಳೆ, ಲೋಕಸಭೆ ಮಾಜಿ ಸ್ಪೀಕರ್ ಮೀರಾ ಕುಮಾರ್ ಅವರನ್ನು ಕಣಕ್ಕಿಳಿಸಿದ ಕಾರಣ ಚುನಾವಣೆ ಅನಿವಾರ್ಯವಾಗಿದೆ. ಪ್ರಸ್ತುತ ಎರಡೂ ಮೈತ್ರಿಕೂಟಗಳ ಬಲಾಬಲ ಲೆಕ್ಕಾಚಾರಗಳ ಮೇಲೆ ಇಬ್ಬರೂ ಅಭ್ಯರ್ಥಿಗಳ ಸೋಲು-ಗೆಲುವಿನ ಲೆಕ್ಕಾಚಾರ ನಡೆದಿದ್ದು, ಕೋವಿಂದ ಗೆಲುವು ನಿಚ್ಚಳ ಎಂಬ ವಾತಾವರಣ ನಿರ್ಮಾಣವಾಗಿದೆ.

'ಯಾರು ಈ ಕೋವಿಂದ?' -2015ರ ಆಗಸ್ಟ್ ಮೊದಲ ವಾರದಲ್ಲಿ ಬಿಹಾರ ರಾಜಕಾರಣಿಗಳನ್ನು ಕಾಡಿದ ಪ್ರಶ್ನೆ. ಬಿಹಾರದ ಹೊಸ ರಾಜ್ಯಪಾಲರ ಹೆಸರು ಘೋಷಣೆಯಾದ ಸಂದರ್ಭ ಅದು. ಬಿಹಾರದ ಬಹುತೇಕ ಬಿಜೆಪಿ ನಾಯಕರಿಗೂ ಆ ಹೆಸರು ಹೊಸದಾಗಿತ್ತು. ಸಾಮಾನ್ಯವಾಗಿ ರಾಜ್ಯಪಾಲರ ನೇಮಕ ಮಾಡುವಾಗ ಕೇಂದ್ರ ಸರ್ಕಾರ ಆ ರಾಜ್ಯದ ಮುಖ್ಯಮಂತ್ರಿಗೆ ಅದರ ಮುನ್ಸೂಚನೆಯನ್ನು ನೀಡುವುದು ವಾಡಿಕೆ. ಆದರೆ, ಬಿಹಾರದ ವಿಚಾರದಲ್ಲಿ ಹಾಗಾಗಲಿಲ್ಲ. ಬಿಜೆಪಿ ಜತೆಗಿನ ಮೈತ್ರಿ ಕಡಿದುಕೊಂಡಿದ್ದ ನಿತೀಶ್ ಕುಮಾರ್‌ಗೆ ಹೊಸ ರಾಜ್ಯಪಾಲರ ನೇಮಕದ ಯಾವುದೇ ಮುನ್ಸೂಚನೆ ಸಿಕ್ಕಿರಲಿಲ್ಲ. ಈ ವಿಷಯವನ್ನು ನಿತೀಶ್ ಆಪ್ತ ವಿಜಯ್ ಚೌಧರಿ ಹೇಳಿದ್ದರು. ಇನ್ನೊಂದೆಡೆ, ಬಿಹಾರದ ರಾಜ್ಯಪಾಲ ಸ್ಥಾನಕ್ಕೆ ರಾಮನಾಥ ಕೋವಿಂದ ಹೆಸರು

ಘೋಷಣೆಯಾದ ಬೆನ್ನಲ್ಲೆ, “I congratulate Kovind for being appointed the new governor. He hails from the Dalit classes’ ಎಂದು ಪ್ರಧಾನ ಮಂತ್ರಿ ನರೇಂದ್ರ ಮೋದಿಯವರು ಹೇಳಿದ್ದರೆಂಬ ಅಂಶಗಳತ್ತ ಮಾಧ್ಯಮಗಳು ಬೆಳಕು ಚೆಲ್ಲಿದ್ದವು.

ರಾಮನಾಥ ಕೋವಿಂದ ಅವರ ‘ದಲಿತ’ ಕಾರ್ಡನ್ನು ಬಿಜೆಪಿ ಬಳಸಿಕೊಳ್ಳಲು ಪ್ರಯತ್ನಿಸಿರುವುದು ಇದೇ ಮೊದಲಲ್ಲ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಈ ಹಿಂದೆಯೂ ಬಿಜೆಪಿ ಈ ಯತ್ನ ನಡೆಸಿತ್ತಾದರೂ ಸೂಕ್ತ ಫಲಿತಾಂಶ ದಕ್ಕಿರಲಿಲ್ಲ. 2012ರ ಉತ್ತರ ಪ್ರದೇಶ ವಿಧಾನಸಭಾ ಚುನಾವಣೆ ವೇಳೆ ದಲಿತ ಬಾಹುಳ್ಯ ಉಳ್ಳ ಪ್ರದೇಶಗಳಲ್ಲಿ ಮಾಯಾವತಿ ವಿರುದ್ಧ ಪ್ರಚಾರಕ್ಕೆ ಕೋವಿಂದ ಅವರನ್ನು ರಾಜನಾಥ್ ಸಿಂಗ್ ಬಳಸಿಕೊಂಡಿದ್ದರು. ಉತ್ತರ ಪ್ರದೇಶದಲ್ಲಿ ಅವರನ್ನು ಬಿಜೆಪಿಯ ‘ದಲಿತ ನಾಯಕ’ ಎಂದು ಬಿಂಬಿಸುವುದಕ್ಕೆ ರಾಜನಾಥ್ ಇನ್ನಿಲ್ಲದಂತೆ ಪ್ರಯತ್ನಿಸಿದ್ದರು. ಆದರೆ, ಅಲ್ಲಿನ ಪ್ರಬಲ ನಾಯಕರು ಇದಕ್ಕೆ ಅಡ್ಡಿಯಾಗಿದ್ದಲ್ಲದೆ, ಕೋವಿಂದ ಅವರು ಇನ್ನೊಬ್ಬ ಕಲ್ಯಾಣ್ ಸಿಂಗ್ ಆಗಬಹುದೆಂಬ ಆತಂಕ ವ್ಯಕ್ತಪಡಿಸಿದ್ದರು. ಪರಿಣಾಮ ರಾಜನಾಥ್ ಸಿಂಗ್ ಪ್ರಯತ್ನಕ್ಕೆ ಹಿನ್ನಡೆಯಾಯಿತು. ಆದಾಗ್ಯೂ, ಆ ಚುನಾವಣೆಯಲ್ಲಿ ದಲಿತ ಮತಬ್ಯಾಂಕ್ ಸೆಳೆಯುವಲ್ಲಿ ಕೋವಿಂದ ವಿಫಲರಾದರು.

ಬಿಹಾರದ ರಾಜಕೀಯ ಬೆಳವಣಿಗೆ ಗಮನಿಸಿ ಹೇಳುವುದಾದರೆ, ಕೋವಿಂದ ‘ದಲಿತ ಕಾರ್ಡ’ನ್ನು ಬಿಜೆಪಿ ಸಮರ್ಪಕವಾಗಿ ಬಳಸಿಕೊಂಡದ್ದು ಇದೇ ರಾಜ್ಯದಲ್ಲಿ. ಬಿಜೆಪಿಯ ಬಿಹಾರದ ದಲಿತ ನಾಯಕರ ಪೈಕಿ ಕೇಂದ್ರ ಸಚಿವ ರಾಮ್ ವಿಲಾಸ್ ಪಾಸ್ವಾನ್ ಮತ್ತು ಮಾಜಿ ಮುಖ್ಯಮಂತ್ರಿ ಜಿತನ್ ರಾಮ್ ಮಾನ್ಝಿ ಪ್ರಮುಖರು. ಮಾನ್ಝಿ ಮುಸಾಹರ್ ಸಮುದಾಯದವರಾದರೆ, ಪಾಸ್ವಾನ್ ದುಸ್ಸಾಧ್ ಸಮುದಾಯದವರು. ಜಿತನ್ ರಾಮ್ ಮಾನ್ಝಿ ಅವರನ್ನು ಮುಖ್ಯಮಂತ್ರಿ ಪದವಿಯಿಂದ ಕೆಳಕ್ಕಿಳಿಸಿದ ನಿತೀಶ್ ಕುಮಾರ್ ನಡೆ ದಲಿತ ಸಮುದಾಯದ ಆಕ್ರೋಶಕ್ಕೆ ಕಾರಣವಾಗಿತ್ತು. ಈ ಬೆಳವಣಿಗೆ ಆದಾಗ ಜಿತನ್ ಇನ್ನೂ ಬಿಜೆಪಿ ಸೇರ್ಪಡೆಗೊಂಡಿರಲಿಲ್ಲ. ಆದಾಗ್ಯೂ, ಅವರ ಬೆನ್ನಿಗೆ ನಿಂತಿದ್ದು ಬಿಜೆಪಿ. ಬಿಹಾರದಲ್ಲಿ ದಲಿತರನ್ನು ಓಲೈಸುವ ಕ್ರಮ ಮುಂದುವರಿಸಿದ ಬಿಜೆಪಿ, ರಾಜ್ಯಪಾಲರ ನೇಮಕದಲ್ಲೂ ಅದೇ ನಡೆ ಅನುಸರಿಸಿತು. ಪ್ರಧಾನಿ ಮೋದಿ ಕೋವಿಂದರನ್ನು ಅಭಿನಂದಿಸುವಾಗ ‘ದಲಿತ ಕಾರ್ಡ’ನ್ನು ವಿಶೇಷವಾಗಿ ಉಲ್ಲೇಖಿಸಿದ್ದು ಇದೇ ಕಾರಣಕ್ಕೆ.

ರಾಜ್ಯಪಾಲರ ನೇಮಕದ ಬಗ್ಗೆ ನಿತೀಶ್ ಕುಮಾರ್ ಅವರಿಗೆ ಸುಳಿವು ನೀಡದೆ ಹೋದರೂ, ನಂತರದಲ್ಲಿ ಕೋವಿಂದ ಹಾಗೂ ನಿತೀಶ್ ನಡುವೆ ಆಪ್ತತೆ ಬೆಳೆಯಿತು. ಇದರೊಂದಿಗೆ ಬಿಹಾರದ ಶೇಕಡ 16 ಇರುವ ದಲಿತ ಮತಬ್ಯಾಂಕನ್ನು ಬಿಜೆಪಿ ಗಟ್ಟಿಮಾಡಿಕೊಳ್ಳಲು ಅನುಕೂಲವಾಯಿತು. ಈಗ ರಾಮನಾಥ ಕೋವಿಂದ ರಾಷ್ಟ್ರಪತಿ ಅಭ್ಯರ್ಥಿಯಾಗುತ್ತಿದ್ದಂತೆ ನಿತೀಶ್ ಕುಮಾರ್ ಬೆಂಬಲ ವ್ಯಕ್ತವಾಗಿದ್ದೂ ಇದೇ ‘ದಲಿತ’ ರಾಜಕಾರಣದ ಭಾಗವೇ.

ಕೋವಿಂದ ಬಿಜೆಪಿ ಸೇರ್ಪಡೆಯಾಗಿದ್ದು 1991ರಲ್ಲಿ. 1998ರಿಂದ 2002ರ ತನಕ ಬಿಜೆಪಿ ದಲಿತ ಮೋರ್ಚಾದ ಅಧ್ಯಕ್ಷರಾಗಿದ್ದರು. ಅಖಿಲ ಭಾರತ ಕೋಲಿ ಸಮಾಜದ ಅಧ್ಯಕ್ಷರೂ ಆಗಿದ್ದರು. ಈ ನಡುವೆ ಅವರು ಚುನಾವಣಾ ರಾಜಕೀಯದ ಮೂಲಕ ನೇರ ಜನರಿಂದಲೇ ಆಯ್ಕೆಯಾಗಿ ವಿಧಾನಸಭೆ ಪ್ರವೇಶಿಸಲು ಪ್ರಯತ್ನಿಸಿದ್ದರು. ಉತ್ತರಪ್ರದೇಶದ ಘಟಂಪುರ ಮತ್ತು ಭೋಗ್ನಿಪುರ ವಿಧಾನಸಭಾ ಕ್ಷೇತ್ರಗಳಲ್ಲಿ ಬಿಜೆಪಿ ಅಭ್ಯರ್ಥಿಯಾಗಿ ಕಣಕ್ಕೆ ಇಳಿದು ಸೋಲು ಕಂಡಿದ್ದರು. 1994-2000 ಮತ್ತು 2000-2006ರ ಅವಧಿಗೆ ಎರಡು ಬಾರಿ ಉತ್ತರಪ್ರದೇಶದಿಂದ ರಾಜ್ಯಸಭೆ

ಸದಸ್ಯರಾಗಿದ್ದರು. ಹಾಗೆಯೇ, ವಿಶ್ವಸಂಸ್ಥೆಯಲ್ಲೂ ಭಾರತವನ್ನು ಪ್ರತಿನಿಧಿಸಿದ ಕೋವಿಂದ, 2002ರ ಅಕ್ಟೋಬರ್‌ನಲ್ಲಿ ವಿಶ್ವಸಂಸ್ಥೆ ಜನರಲ್ ಅಸೆಂಬ್ಲಿಯನ್ನು ಉದ್ದೇಶಿಸಿ ಮಾತನಾಡಿದ್ದರು ಕೂಡ.

1994ರಲ್ಲಿ ರಾಜ್ಯಸಭಾ ಸದಸ್ಯರಾಗುವ ಮುನ್ನ ದೆಹಲಿಯ ಕಾಲಿಬರಿಯಲ್ಲಿ ಬಾಡಿಗೆ ಅಪಾರ್ಟ್‌ಮೆಂಟ್‌ನಲ್ಲಿ ಬದುಕು ಸಾಗಿಸಿದವರು. ಬದುಕಿನ ಕಷ್ಟಗಳನ್ನು ಕಂಡವರು. ವಿವಾದಗಳಿಂದ ದೂರ ಉಳಿಯ ಬಯಸುವ ಅವರು ಮಾಧ್ಯಮಗಳ ಎದುರು ಹಾಜರಾಗುತ್ತಿದ್ದುದೇ ವಿರಳ. ಅವರು ಪಕ್ಷದ ರಾಷ್ಟ್ರೀಯ ವಕ್ತಾರನ ಹೊಣೆಗಾರಿಕೆ ಹೊತ್ತಿದ್ದಾಗಲೂ ಇದೇ ನೀತಿಯನ್ನು ಅನುಸರಿಸಿದವರು.

ಇನ್ನು ಅವರ ವೈಯಕ್ತಿಕ ಜೀವನದೆಡೆ ನೋಡಿದರೆ, ಉತ್ತರ ಪ್ರದೇಶದ ಕಾನ್ಪುರ ಅವರ ಊರು. 1945 ಅಕ್ಟೋಬರ್ 1ರಂದು ಜನನ. ಮೈಕು ಲಾಲ್ ತಂದೆ, ಕಲಾವತಿ ತಾಯಿ. ಕೃಷಿ ಕುಟುಂಬದ ಹಿನ್ನೆಲೆಯಿಂದ ಬಂದ ಅವರು ವಾಣಿಜ್ಯ ಹಾಗೂ ಕಾನೂನು ಪದವಿ ಪಡೆದರು. ಬಳಿಕ ಸ್ಪರ್ಧಾತ್ಮಕ ಪರೀಕ್ಷೆ ಬರೆದ ಅವರು ಮೂರನೇ ಪ್ರಯತ್ನದಲ್ಲಿ ಐಎಎಸ್ ಉತ್ತೀರ್ಣರಾದರು. ಬಳಿಕ ನಾಗರಿಕ ಸೇವಾ ಕ್ಷೇತ್ರದಲ್ಲಿ ಕೆಲಸಮಾಡಲು ಅವಕಾಶ ಸಿಗಲಿಲ್ಲ ಎಂದು ಐಎಎಸ್ ತೊರೆದರು. ವಕೀಲಿಕೆ ಆರಂಭಿಸಿದರು. 1977ರಿಂದ 79ರ ತನಕ ದೆಹಲಿ ಹೈಕೋರ್ಟ್‌ನಲ್ಲಿ ಕೇಂದ್ರ ಸರ್ಕಾರದ ಪರ ನ್ಯಾಯವಾದಿಯಾಗಿ ಕೆಲಸ ಮಾಡಿದರು. 1980ರಿಂದ 93ರ ತನಕ ಕೇಂದ್ರ ಸರ್ಕಾರದ ಸ್ಟ್ಯಾಂಡಿಂಗ್ ಕೌನ್ಸೆಲ್ ಆಗಿದ್ದರು. ಮಾಜಿ ಪ್ರಧಾನಿ ಮುರಾರ್ಜಿ ದೇಸಾಯಿ ಅವರ ಪರ್ಸನಲ್ ಅಸಿಸ್ಟೆಂಟ್ ಆಗಿಯೂ 1977-78ರಲ್ಲಿ ಕೆಲಸ ಮಾಡಿದ್ದರು. ಅವರ ರಾಷ್ಟ್ರನಿಷ್ಠೆ, ಸಂಘ(ಆರೆಸ್ಸೆಸ್) ನಿಷ್ಠೆ ಬಗ್ಗೆ ಎರಡು ಮಾತಿಲ್ಲ. ಅವರು ದೇರಾಪುರದಲ್ಲಿರುವ ತಮ್ಮ ಹಿರೀಕರ ಮನೆಯನ್ನು ಆರೆಸ್ಸೆಸ್‌ಗೆ ದಾನ ನೀಡಿದ್ದಾರೆ. ಕುಟುಂಬದ ಬಗ್ಗೆ ಹೇಳುವುದಾದರೆ, 1974 ಮೇ 30ರಂದು ಕೋವಿಂದ ಅವರು ಸವಿತಾರನ್ನು ವಿವಾಹವಾದರು. ಪುತ್ರ ಪ್ರಶಾಂತ್, ಪುತ್ರಿ ಸ್ವಾತಿ.

ಸದ್ಯ ರಾಷ್ಟ್ರಪತಿ ಚುನಾವಣಾ ಕಣಕ್ಕೆ ಎನ್‌ಡಿಎ ಅಭ್ಯರ್ಥಿಯಾಗಿರುವ ಕೋವಿಂದ ಈ ಉನ್ನತ ಹುದ್ದೆಗೇರುವ ಎರಡನೇ ದಲಿತ ನಾಯಕರಾಗುವ ಸಾಧ್ಯತೆಗಳು ದಟ್ಟವಾಗಿವೆ.

••••• ಮಾಹಿತಿ ವೇದಿಕೆ ••••••••

## ಅನುಪಮ ಖೇರ್

==========

‘ರೆಸ್ಟೋರೆಂಟ್‌ಗಳಲ್ಲಿ ತಾಸುಗಟ್ಟಲೆ ಕಾಯುವ, ಟಾಕೀಸುಗಳಲ್ಲಿ ಟಿಕೆಟ್‌ಗಾಗಿ ಕ್ಯೂ ನಿಲ್ಲುವ ಜನರಿಗೆ ರಾಷ್ಟ್ರಗೀತೆ ಹಾಡುವಾಗ 52 ಸೆಕೆಂಡ್ ಎದ್ದುನಿಲ್ಲಲು ಆಗುವುದಿಲ್ಲವೇ? ಹಿರಿಯರು ಬಂದರೆ ಎದ್ದುನಿಂತು ಗೌರವ ಸೂಚಿಸಿದಂತೆ ರಾಷ್ಟ್ರಗೀತೆಗಾಗಿ ಎದ್ದು ನಿಲ್ಲುವುದು ದೇಶಕ್ಕೆ ತೋರುವ ಗೌರವ’.

‘ದೇಶ ಕಳೆದ ಮೂರು ವರ್ಷಗಳಿಂದ ಎಲ್ಲ ಕ್ಷೇತ್ರಗಳಲ್ಲಿ ಅಭಿವೃದ್ಧಿಯತ್ತ ಸಾಗುತ್ತಿದೆ. ಇದನ್ನು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳಬೇಕು. ಆದರೆ, ನಮ್ಮಲ್ಲಿ ಅಸಹಿಷ್ಣುತೆ ಬಗ್ಗೆ ಮಾತಾಡುವವರು ಅಭಿವೃದ್ಧಿ ಬಗ್ಗೆ, ಒಳ್ಳೆಯ ಕೆಲಸಗಳ ಬಗ್ಗೆಯೇ ಅಸಹಿಷ್ಣುತೆ ತೋರುತ್ತಿದ್ದಾರೆ’.

ರಾಷ್ಟ್ರವಾದ, ಅಭಿವೃದ್ಧಿಯ ವಿಷಯ ಬಂದಾಗ ಯಾವುದೇ ಮುಲಾಜಿಗೂ ಒಳಗಾಗದೆ ಖಡಕ್ ಮಾತಿನ ಮೂಲಕ ಗಮನ ಸೆಳೆಯುವ ಈ ವ್ಯಕ್ತಿ ರಾಜಕಾರಣಿ ಅಲ್ಲ, ಸ್ವಯಂಘೋಷಿತ ಬುದ್ಧಿಜೀವಿಯೂ ಅಲ್ಲ. ನಾಟಕಗಳಲ್ಲಿ ನಟಿಸುತ್ತ ಹಾಲಿವುಡ್ ಅಂಗಳದವರೆಗೂ ತಲುಪಿದ ಕಲಾವಿದ, ನಟ. ಹೌದು, ಅನುಪಮ್ ಖೇರ್ ಎಂಬ ದೈತ್ಯಪ್ರತಿಭೆ ಇತ್ತೀಚೆಗೆ ತಮ್ಮ ಹೇಳಿಕೆಗಳಿಂದ ಸುದ್ದಿಯಲ್ಲಿದ್ದಾರೆ. ಇವರ ಟ್ವೀಟ್‌ಗಳು ಸಾಮಾಜಿಕ ಮಾಧ್ಯಮ ವಲಯದಲ್ಲಿ ಸಂಚಲನವನ್ನೇ ಮೂಡಿಸಿ, ಚರ್ಚೆಗೆ ಗ್ರಾಸವಾಗುತ್ತಿವೆ. ಹಾಗೆಂದು ಅನುಪಮ್ ಸುಮ್ಮನೇ ಹೇಳಿಕೆ ನೀಡುವುದಿಲ್ಲ. ಅವರ ಮಾತುಗಳ ಹಿಂದೆ ನಿಜವಾದ ಕಳಕಳಿ, ಸಮಾಜ, ರಾಷ್ಟ್ರದ ಪರ ಸಂವೇದನೆ ಇರುವುದನ್ನು ಯಾರಾದರೂ ಗುರುತಿಸಬಹುದು.

ಕಳೆದ ತಿಂಗಳು ಖೇರ್ ಫಿಲ್ಮ್ ಆಂಡ್ ಟೆಲಿವಿಜನ್ ಇನ್‌ಸ್ಟಿಟ್ಯೂಟ್ ಅಧ್ಯಕ್ಷರಾಗಿ ನೇಮಕಗೊಂಡಿದ್ದಾರೆ. ಅಧಿಕಾರ ಸ್ವೀಕರಿಸುತ್ತಲೇ ವಿದ್ಯಾರ್ಥಿಗಳಿಗೆ ಬಹಿರಂಗ ಪತ್ರ ಬರೆದ ಅವರು- ‘ನಾನು 39 ವರ್ಷಗಳ ಹಿಂದೆ ಇದೇ ಸಂಸ್ಥೆಯ ವಿದ್ಯಾರ್ಥಿಯಾಗಿದ್ದೆ. ಈಗ ಅಧ್ಯಕ್ಷನಾಗಿದ್ದರೂ ನಿಮ್ಮೆಲ್ಲರ ಸೀನಿಯರ್‌ನಂತೆ ಕಾರ್ಯನಿರ್ವಹಿಸುತ್ತೇನೆ’ ಎಂದು ವಿನಯದಿಂದ ಹೇಳಿದ್ದಾರೆ. ‘ಕುಛ್ ಭೀ ಹೋ ಸಕ್ತಾ ಹೈ’ (ಡಿಡಿಡಿ.ಚ್ಞಿರಿಟ್ಟಟ್ಟಛಿಟಚ್ಞಛಿಠ.ಛಿಠಿ) ಎಂಬ ತಮ್ಮ ಆಕ್ಟಿಂಗ್ ಸ್ಕೂಲ್ ಮೂಲಕ ನೂರಾರು ಉದಯೋನ್ಮುಖ ನಟರನ್ನು ತಯಾರು ಮಾಡುತ್ತಿರುವ, ಅನುಪಮ್ ಖೇರ್ ಫೌಂಡೇಷನ್ (ಡಿಡಿಡಿ.ಚ್ಞ್ಮಚಿಞkಜಛ್ಟ್ಞೆಛ್ಠಛಿಚಠಿಜಿಟ್ಞ.ಟ್ಟಜ) ಮೂಲಕ ಬಡಮಕ್ಕಳಿಗೆ ಶಿಕ್ಷಣ ಮತ್ತು ಜೀವನಾವಶ್ಯಕ ಮೌಲ್ಯಗಳನ್ನು ನೀಡುತ್ತಿರುವ ಖೇರ್ ಬದುಕು ಕುತೂಹಲಕರ.

ಹಿಮದ ಮಡಿಲಿನಲ್ಲಿರುವ ನಿಸರ್ಗರಮ್ಯ ತಾಣ ಶಿಮ್ಲಾದಲ್ಲಿ (1955 ಮಾರ್ಚ್ 7) ಜನಿಸಿದ ಅನುಪಮ್ ಬಾಲ್ಯದಲ್ಲೇ ಮಿಮಿಕ್ರಿ ಮಾಡುತ್ತಿದ್ದ, ಶಾಲೆಯ ನಾಟಕಗಳಲ್ಲಿ ಪಾತ್ರ ಮಾಡುತ್ತಿದ್ದ. ತಂದೆ ಪುಷ್ಕರ್ ನಾಥ್ ಅರಣ್ಯ ಇಲಾಖೆಯಲ್ಲಿ ಕ್ಲರ್ಕ್. ತಾಯಿ ದುಲಾರಿ ಗೃಹಿಣಿ. ಅಜ್ಜ-ಅಜ್ಜಿ, ಚಿಕ್ಕಪ್ಪ-ಚಿಕ್ಕಮ್ಮ, ಸೋದರ ಸಂಬಂಧಿ ಸೇರಿ 11 ಜನರು ಒಟ್ಟಾಗಿ ವಾಸಿಸುತ್ತಿದ್ದ ಅವಿಭಕ್ತ ಕುಟುಂಬ ಇವರದ್ದು. ತಂದೆಗೆ ಬರುತ್ತಿದ್ದ 90 ರೂಪಾಯಿ ಸಂಬಳದಲ್ಲೇ ಸಂಸಾರದ ನೌಕೆ ಸಾಗಬೇಕಿತ್ತು. ಖರ್ಚು ನಿರ್ವಹಿಸುವುದು ಕಷ್ಟವಾದಾಗ ತಾಯಿ ದುಲಾರಿ ತನ್ನ ಬಂಗಾರದ

ಒಡವೆಗಳನ್ನು ಮಾರಲು ಗಂಡನಿಗೆ ಕೊಟ್ಟು ಬಿಡುತ್ತಿದ್ದರಂತೆ. ಆದರೂ, 'ಮಕ್ಕಳ ಮೇಲೆ ಪ್ರೀತಿ ಇತ್ತು. ನನಗೆ ಸಿಗುತ್ತಿದ್ದ 10 ಪೈಸೆ ಪಾಕೆಟ್ ಮನಿ ಎಂದೂ ತಪ್ಪುತ್ತಿರಲಿಲ್ಲ' ಎಂದು ಅನುಪಮ್ ಹೇಳಿಕೊಂಡಿದ್ದಾರೆ.

ಪ್ರಾಥಮಿಕ, ಪ್ರೌಢ ಶಿಕ್ಷಣದ ಬಳಿಕ ಚಂಡೀಗಢದ ಇಂಡಿಯನ್ ಥೇಟರ್‌ನಲ್ಲಿ ಪ್ರವೇಶ ಪಡೆಯಲು 100 ರೂಪಾಯಿ ಅಗತ್ಯವಿತ್ತು. ಮನೆಯಲ್ಲಿ ಕೇಳಿದರೆ ಒಂದು ರೂಪಾಯಿಯೂ ಹುಟ್ಟಲಿಲ್ಲ. ಆಗ ದೇವಿ ಮಂದಿರವೊಂದರಿಂದ 100 ರೂ. ಕದ್ದು ನಟನೆಯ ತರಬೇತಿಗಾಗಿ ಸೇರಿಕೊಂಡರು. ಮುಂದೆ, ಪಂಜಾಬ್ ವಿವಿಯ ನಟನಾ ತರಬೇತಿ ವಿಭಾಗದ ಕೋರ್ಸ್‌ಗೆ ಸೇರಿ ಅಗ್ರ ಶ್ರೇಯಾಂಕಿತರಾಗಿ ಹೊಮ್ಮಿ, ಚಿನ್ನದ ಪದಕ ಪಡೆದುಕೊಂಡರು. ಆಗ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ(ಎನ್‌ಎಸ್‌ಡಿ) ಸೇರುವ ಹಾದಿ ಸುಲಭವಾಯಿತು. ಎನ್‌ಎಸ್‌ಡಿಯಲ್ಲಿ ನಟನೆಯ ರಹಸ್ಯಗಳನ್ನು, ಕೌಶಲಗಳನ್ನು ಶೋಧಿಸಿದ ಅವರು ರಂಗಭೂಮಿಯ ಮೇಲೆ ಎಲ್ಲ ಬಗೆಯ ಪಾತ್ರಗಳನ್ನು ನಿಭಾಯಿಸಿದರು. ಆ ಬಳಿಕ ಹೋಗಿದ್ದು ಬೆಡಗಿನ ನಗರಿ ಮುಂಬೈಗೆ. 'ನಾನು ಕ್ವಾಲಿಫೈಡ್ ಆಕ್ಟರ್‌ನಾದ್ದರಿಂದ ಅವಕಾಶಗಳು ಸುಲಭವಾಗಿ ಸಿಗುತ್ತವೆ ಎಂದುಕೊಂಡಿದ್ದೆ. ಮುಂಬೈಗೆ ಬಂದ ಮೇಲೆ ಗೊತ್ತಾಯ್ತು ಇಲ್ಲಿ ನಟನೆಯ ಅತಿರಥ-ಮಹಾರಥರೇ ಇದ್ದಾರೆ ಎಂದು'- ಹೀಗೆ ಆ ದಿನಗಳನ್ನು ನೆನಪಿಸಿಕೊಳ್ಳುವ ಖೇರ್ ಅವಕಾಶಕ್ಕಾಗಿ ಚಾತಕಪಕ್ಷಿಯಂತೆ ಕಾದರು. ಮುಂಬೈಯ ಚಾಳ್‌ನ ಒಂದು ಸಣ್ಣ ಮೂಲೆಯಲ್ಲಿ ಐದು ಜನರು ವಾಸ ಮಾಡುತ್ತಿದ್ದರು. ಪ್ರತಿನಿತ್ಯ ಊಟ ಸಿಗೋದು ಪಕ್ಕಾ ಇರಲಿಲ್ಲ. ಆಗ ಸಹೋದರ ರಾಜುವನ್ನು ಮುಂಬೈಗೆ ಕರೆಸಿಕೊಂಡರು. ಆತ ಫ್ಯಾಕ್ಟರಿಯೊಂದರಲ್ಲಿ ಕೆಲಸ ಆರಂಭಿಸಿದ. ರಾಜುಗೆ ಬರುತ್ತಿದ್ದ 700 ರೂ. ಸಂಬಳದಲ್ಲೇ ಈ ಸಹೋದರರು ದಿನದೂಡತೊಡಗಿದರು.

ಅದೊಮ್ಮೆ ನಿರ್ದೇಶಕ ಮಹೇಶ್ ಭಟ್‌ರನ್ನು ಭೇಟಿಯಾಗಿ, ಅವಕಾಶಕ್ಕಾಗಿ ಕೋರಿದರು. ಇವರ ನಟನಾಕೌಶಲದ ಬಗ್ಗೆ ಕೇಳಿ ತಿಳಿದಿದ್ದ ಭಟ್ 'ಸಾರಾಂಶ' ಚಿತ್ರದಲ್ಲಿ ಪಾತ್ರ ಕೊಟ್ಟರು. ಈ ಚಿತ್ರದಲ್ಲಿ ಖೇರ್ ನಟನೆ ಯಾವ ಪರಿ ಜನಮನ ಗೆದ್ದಿತೆಂದರೆ ಈ ಸಿನಿಮಾ ಬಿಡುಗಡೆಯಾದ ಹತ್ತೇ ದಿನಗಳಲ್ಲಿ ಖೇರ್‌ಗೆ 100 ಸಿನಿಮಾಗಳಲ್ಲಿ ನಟಿಸಲು ಆಫರ್‌ಗಳು ಬಂದವು. ಆ ಬಳಿಕ ಹಿಂತಿರುಗಿ ನೋಡಿದ್ದೇ ಇಲ್ಲ. ನಟ, ಹಾಸ್ಯನಟ, ಖಳನಟ, ಪೋಷಕನಟನಾಗಿ ವಿವಿಧ ಪ್ರಾದೇಶಿಕ ಭಾಷೆ, ಬಾಲಿವುಡ್, ಹಾಲಿವುಡ್ ಸೇರಿ 500ಕ್ಕೂ ಹೆಚ್ಚು ಚಲನಚಿತ್ರಗಳಲ್ಲಿ ನಟಿಸಿದ್ದಾರೆ. ಪ್ರತಿಭಾವಂತ ನಟರನ್ನು ರೂಪಿಸಲು ತಮ್ಮದೇ ನಟನಾ ಶಾಲೆ ಆರಂಭಿಸಿದರು. ಎಂಟು ಬಾರಿ ಫಿಲ್ಮ್ ಫೇರ್ ಅವಾರ್ಡ್, 2004ರಲ್ಲಿ ಪದ್ಮಶ್ರೀ, 2016ರಲ್ಲಿ ಪದ್ಮಭೂಷಣ ಪ್ರಶಸ್ತಿಗೆ ಭಾಜನವಾಗಿರುವ ಖೇರ್ ಜೀವನದ ಯಾವ ಹಂತದಲ್ಲೂ ಸೋಲೊಪ್ಪಿಕೊಳ್ಳದೆ ಮುನ್ನುಗ್ಗಿದ್ದಾರೆ. ಅಂದ ಹಾಗೆ, 'ಹಮ್ ಆಪ್ ಕೇ ಹೈ ಕೌನ್' ಚಿತ್ರದ ಚಿತ್ರೀಕರಣ ಸಂದರ್ಭದಲ್ಲಿ ಪಾರ್ಶ್ವವಾಯುವಿಗೆ ಗುರಿಯಾಗಿದ್ದ ಖೇರ್‌ಗೆ ವೈದ್ಯರು ಎರಡು ತಿಂಗಳ ವಿಶ್ರಾಂತಿ ಸೂಚಿಸಿದ್ದರು. ಆದರೆ, ಮರುದಿನವೇ ಚಿತ್ರೀಕರಣಕ್ಕೆ ಹಾಜರಾಗಿದ್ದು ಅವರ ವೃತ್ತಿಪರತೆಗೆ ಸಾಕ್ಷಿ.

ಲೋಕಸಭಾ ಸದಸ್ಯೆ ಕಿರಣ್ ಖೇರ್ ಅವರನ್ನು ಮದುವೆಯಾಗುವ ಮುಂಚಿನ ಅನುಪಮ್ ಪ್ರೇಮಕಥೆಯೂ ಸ್ವಾರಸ್ಯಕರವಾಗಿದೆ. ಉಗ್ಗುವಿಕೆಯ ಸಮಸ್ಯೆಯಿದ್ದ ಖೇರ್‌ಗೆ 'ಕ' ಅಕ್ಷರ ಉಚ್ಚಾರ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಇವರು ಪ್ರೀತಿಸುತ್ತಿದ್ದ ಹುಡುಗಿಯ ಹೆಸರು ಕವಿತಾ ಕಪೂರ್. ಆಕೆ-'ನನ್ನ ಹೆಸರನ್ನು ಸ್ಪಷ್ಟವಾಗಿ ಉಚ್ಚರಿಸಲು ನಿನ್ನಿಂದ ಸಾಧ್ಯವಾದರೆ ಐ ಲವ್ ಯೂ ಎನ್ನುತ್ತೇನೆ' ಎಂಬ ಷರತ್ತು ಇಟ್ಟಳು. ಇದಕ್ಕಾಗಿ ಸಾಕಷ್ಟು ಪ್ರಯತ್ನ ನಡೆಸಿದರೂ ಸಾಧ್ಯವಾಗದೆ ಕೊನೆಗೆ, 'ತವಿತಾ ತಪೂರ್ ಐ ಹೇಟ್ ಯೂ' ಎಂದು ಜೋರಾಗಿ ಹೇಳಿ ಆಕೆಯೊಂದಿಗಿನ

ಸಂಬಂಧ ಕಡಿದುಕೊಂಡರು. ಕಿರಣ್‌ರೊಂದಿಗೆ ಒಟ್ಟಾಗಿ ನಾಟಕಗಳನ್ನು ಮಾಡಿದ್ದ ಅನುಪಮ್ ಅವರನ್ನೇ ಬಾಳಸಂಗಾತಿಯಾಗಿಸಿಕೊಂಡರು. ಅಧ್ಯಾತ್ಮಕ್ಕೂ ಪ್ರಾಧಾನ್ಯ ನೀಡಿರುವ ಇವರು ಜೀವನೋತ್ಸಾಹದ ಚಿಲುಮೆ. ಈಗ ಸಾಮಾಜಿಕ ಬದುಕಿನಲ್ಲೂ ಸಕ್ರಿಯವಾಗಿದ್ದು ನೇರ, ದಿಟ್ಟ ಉತ್ತರಗಳ ಮೂಲಕ 'ಫೈರ್‌ಬ್ರ್ಯಾಂಡ್' ಇಮೇಜ್ ತಮ್ಮದಾಗಿಸಿಕೊಂಡಿದ್ದಾರೆ.

ಹೀಗೆ ಶೂನ್ಯದಿಂದ ಸಾಧನೆಯ ಎತ್ತರಕ್ಕೆ ತಲುಪಿರುವ ಅನುಪಮ್‌ೆ ಸಹಜವಾಗಿಯೇ ಬಡವರ ಕಷ್ಟಗಳು, ಸಮಾಜದ ನೋವು ಬೇಗನೆ ಅರ್ಥವಾಗುತ್ತದೆ. ಆ ಸಾತ್ವಿಕ ಆಕ್ರೋಶದಿಂದ ಹೊರಡುವ ಅವರ ಮಾತಲ್ಲಿ ಅಸಹಿಷ್ಣುತೆಯ ಛಾಯೆ ಇಲ್ಲ, ಬದಲಾಗಿ ಸಮಾಜಪರ ಸಂವೇದನೆ ಇದೆ, ನೋವಿಗೆ ಸ್ಪಂದಿಸುವ ಸಾಂತ್ವನದ ಗುಣವಿದೆ. ಅದಕ್ಕೆಂದೇ ಅವರು ನಟ ಎನ್ನುವುದಕ್ಕಿಂತ ಹೆಚ್ಚಾಗಿ ವ್ಯಕ್ತಿಯಾಗಿ, ಜಾಗೃತ ದನಿಯಾಗಿ ಇಷ್ಟವಾಗುತ್ತಾರೆ, ಗಮನ ಸೆಳೆಯುತ್ತಾರೆ.

•••••••• ಮಾಹಿತಿ ವೇದಿಕೆ ••••••••

## ಜಿನ್ ಪಿಂಗ್

=========

ಜಗತ್ತು ಸಹಜ ಕುತೂಹಲದಿಂದ ಗಮನಿಸುವ ಬಲಿಷ್ಠ ದೇಶಗಳ ಪೈಕಿ ಚೀನಾ ಕೂಡ ಒಂದು. ರಾಜಕೀಯ ಮಹತ್ವಾಕಾಂಕ್ಷಿ ನಾಯಕ ಕ್ಸಿ ಜಿನ್‌ಪಿಂಗ್ ಅಧ್ಯಕ್ಷರಾದ ಬಳಿಕ ಅಲ್ಲಿನ ಪ್ರತಿ ರಾಜಕೀಯ ನಡೆಯನ್ನೂ ಸೂಕ್ಷ್ಮವಾಗಿ ಅವಲೋಕಿಸುವ ಕೆಲಸ ನಡೆಯುತ್ತಿದೆ. ಆಧುನಿಕ ಚೀನಾದ ಸಂಸ್ಥಾಪಕ ಕಮ್ಯೂನಿಸ್ಟ್ ನಾಯಕ ಮಾವೋ ಝೆಡಂಗ್ ನಂತರದಲ್ಲಿ ಅತಿ ಪ್ರಭಾವಿ ನಾಯಕರಾಗಿ ಜಿನ್‌ಪಿಂಗ್ ಮೂಡಿರುವುದು ಅದಕ್ಕೆ ಕಾರಣ. ಜಗತ್ತನ್ನೇ ಆಳಬೇಕೆಂಬ ಇರಾದೆಯುಳ್ಳವರು ಜಿನ್‌ಪಿಂಗ್. ಚೀನಾದ ಮಟ್ಟಿಗೆ ನವಯುಗ ಪ್ರವರ್ತಕರಾಗಿ ಛಾಪನ್ನು ಬೀರಿದ ಈ ನಾಯಕ ದೇಶದ ಆಡಳಿತ ವ್ಯವಸ್ಥೆ, ಪಕ್ಷದ ಮೇಲಿನ ಹಿಡಿತವನ್ನು ಬಿಗಿಗೊಳಿಸುತ್ತಲೇ ಬಂದಿದ್ದಾರೆ. ಅವರೀಗ, 138 ಕೋಟಿ ಜನಸಂಖ್ಯೆ, 16 ಲಕ್ಷ ಯೋಧರ ಬಲಿಷ್ಠ ಸೇನೆ, 11 ಲಕ್ಷ ಕೋಟಿ ಡಾಲರ್‌ಗಳ ಅರ್ಥ ವ್ಯವಸ್ಥೆಯನ್ನು ತನ್ನಿಚ್ಛೆಯಂತೆ ಮುನ್ನಡೆಸುತ್ತಿದ್ದಾರೆ. ಈ ಬಿಗಿ ಹಿಡಿತದ ಎದುರು ವಿಪಕ್ಷಗಳ ಧ್ವನಿ ಅಡಗಿಯೇ ಹೋಗಿದೆ.

ಚೀನಾ ಕಮ್ಯೂನಿಸ್ಟ್ ಪಾರ್ಟಿ(ಸಿಪಿಸಿ)ಯ 19ನೇ ಮಹಾಧಿವೇಶನ ಇದೇ 18ರಂದು ಆರಂಭವಾಗಿದ್ದು, 24ಕ್ಕೆ ಸಂಪನ್ನಗೊಳ್ಳಲಿದೆ. ಐದು ವರ್ಷಕ್ಕೊಮ್ಮೆ ನಡೆಯುವ ಈ ಮಹಾಧಿವೇಶನದ ಆರಂಭದ ದಿನದ ಜಿನ್‌ಪಿಂಗ್ ಮೂರೂವರೆ ಗಂಟೆ ಮಾಡಿದ ಭಾಷಣ, ಪಕ್ಷಕ್ಕಷ್ಟೇ ಅಲ್ಲ ದೇಶದ ಭವಿಷ್ಯವನ್ನೂ ಬಿಂಬಿಸಿತ್ತು. ಮಾರ್ಕ್ಸಿಸಂ-ಲೆನಿನಿಸಂ, ಮಾವೋ ಚಿಂತನೆ, ಡೆಂಗ್ ಕ್ಸಿಯೋಪಿಂಗ್ ಸಿದ್ಧಾಂತಗಳ ನೆಲೆಯಲ್ಲಿ ಕಟ್ಟಲ್ಪಟ್ಟ ಚೀನಾ ಸಾಮ್ರಾಜ್ಯದಲ್ಲಿ ಇದೀಗ ಜಿನ್‌ಪಿಂಗ್ 'ಸಮಾಜವಾದ'ದ ಚಿಂತನೆಯ ಎರಕ ಹೊಯ್ಯತೊಡಗಿದ್ದಾರೆ. ಅವರು ಭಾಷಣದಲ್ಲಿ ಚೀನಾದ ಅಭಿವೃದ್ಧಿ ಬಗ್ಗೆ ಚೌಕಟ್ಟೊಂದನ್ನು ತೆರೆದಿರಿಸಿದರು. ಚೀನಾವನ್ನು 'ಮಹಾ ಆಧುನಿಕ ಸಮಾಜವಾದಿ ದೇಶ'ವನ್ನಾಗಿ ರೂಪಿಸುವುದು ಅವರ ಇರಾದೆ. ಇದಕ್ಕಾಗಿ ಪಕ್ಷದ ವೇದಿಕೆಯಲ್ಲಿ ಎರಡು ಹಂತ (2020-2035, 2035-2050)ದ ಅಭಿವೃದ್ಧಿ ಯೋಜನೆಯನ್ನು ಮಂಡಿಸಿದ್ದಾರೆ.

ಅವರು ಆರ್ಥಿಕ ಬದಲಾವಣೆ ಬಗ್ಗೆ ಮಾತನಾಡಿದರೇ ಹೊರತು, ಮಾರುಕಟ್ಟೆ ಸುಧಾರಣೆ ಬಗ್ಗೆ ಅಲ್ಲ. ಈ ಹಿಂದಿನ ನಾಯಕರೆಲ್ಲ, ಹಿಂದಿನ ಮಹಾಧಿವೇಶನಗಳಲ್ಲಿ ಚೀನಾವನ್ನು ಮಾರುಕಟ್ಟೆ

ಎಂಬ ನೆಲೆಯಲ್ಲೇ ಬಿಂಬಿಸುತ್ತ ಹೋಗಿದ್ದರು. ಇದಕ್ಕೆ ವ್ಯತಿರಿಕ್ತವಾಗಿ ಜಿನ್‌ಪಿಂಗ್, ಸರ್ಕಾರಿ ಸ್ವಾಮ್ಯದ ಸಂಸ್ಥೆಗಳನ್ನು ಬಲಿಷ್ಠಗೊಳಿಸುವ ಅದನ್ನು ಜಾಗತಿಕ ಮಟ್ಟದಲ್ಲಿ ವಿಸ್ತರಿಸುವ ಇರಾದೆಯನ್ನು ವ್ಯಕ್ತಪಡಿಸಿದರು. ಇನ್ನು ವಿದೇಶ ನೀತಿ ಮತ್ತು ಸೇನಾ ಆಧುನೀಕರಣದ ಬಗ್ಗೆ ಪ್ರಸ್ತಾಪಿಸುತ್ತ, ಚೀನಾವನ್ನು 'ಮಹಾ ಶಕ್ತಿ', 'ಬಲಿಷ್ಠ ರಾಷ್ಟ್ರ' ಎಂದು 25ಕ್ಕೂ ಹೆಚ್ಚು ಬಾರಿ ಹೇಳಿದ ಅವರು 'ಒನ್ ಬೆಲ್ಟ್ ಒನ್ ರೋಡ್' ಯೋಜನೆಯ ಪ್ರಾಮುಖ್ಯತೆ ಕಡೆಗೆ ಬೊಟ್ಟು ಮಾಡಿದರು. ಹಾಗೆಯೇ ಸೇನೆ ಇರುವುದೇ ಯುದ್ಧ ಮಾಡುವುದಕ್ಕೆ, ಅದು ತನ್ನ ಕಾರ್ಯಕ್ಷಮತೆಯನ್ನು ವೃದ್ಧಿಸಿಕೊಳ್ಳುತ್ತ ಗೆಲ್ಲುವುದು ಹೇಗೆಂಬುದರ ಕಡೆಗೆ ಗಮನಹರಿಸುತ್ತಿರಬೇಕು. ಯಾವುದೇ ದೇಶ ಸ್ವಂತದ್ದು ಎನ್ನುವಂತಹ ದ್ವೀಪವನ್ನು ಹೊಂದಿಲ್ಲ. ಎಲ್ಲ ದೇಶಗಳೂ ಭೂಮಿಯನ್ನು ಹಂಚಿಕೊಂಡಿವೆ. 2050ರ ವೇಳೆ ಜಗತ್ತನ್ನೇ ಮುನ್ನಡೆಸಬಲ್ಲ ಹೆಮ್ಮೆಯ ರಾಷ್ಟ್ರವಾಗಿ ಚೀನಾ ತಲೆ ಎತ್ತಲಿದೆ ಎಂದು ವಿಶ್ವಾಸ ವ್ಯಕ್ತಪಡಿಸಿದ್ದಾರೆ.

ಇನ್ನು, 2013ರಲ್ಲಿ ಮಾರ್ಚ್ 14ರಂದು ಚೀನಾದ ಅಧ್ಯಕ್ಷರಾಗಿ ಆಯ್ಕೆಯಾದ ವೇಳೆ ಅವರು, 'ಚೀನಾವನ್ನು ಮತ್ತೆ ಜಾಗತಿಕ ಮಟ್ಟದಲ್ಲಿ ಶಕ್ತಿಶಾಲಿ, ಸಮೃದ್ಧ ರಾಷ್ಟ್ರವನ್ನಾಗಿಸಬೇಕು' ಎಂಬ ಕನಸನ್ನು ಹಂಚಿಕೊಂಡಿದ್ದರು. ಇದಕ್ಕಾಗಿ 2011ರಿಂದಲೇ ಕೆಲಸ ಆರಂಭಿಸಿದ್ದ ಅವರು, ದೇಶದ ಕನಸುಗಾರ ತಾನೆಂದು ಬಿಂಬಿಸಿದ್ದಲ್ಲದೇ, ಈ ಕನಸನ್ನು ನನಸು ಮಾಡುವುದಕ್ಕೆ ಅಗತ್ಯ ಬುನಾದಿಯನ್ನು ಹಾಕಿದ್ದರು. ಜಿನ್‌ಪಿಂಗ್ ಅಧಿಕಾರ ಸ್ವೀಕರಿಸುವ ವೇಳೆ ಲಂಚಬಾಕರು, ಭ್ರಷ್ಟಾಚಾರಿಗಳಿಂದಾಗಿ ಕಮ್ಯೂನಿಸ್ಟ್ ಪಕ್ಷದ ಆಂತರಿಕ ವ್ಯವಸ್ಥೆ ಸಂಪೂರ್ಣ ಹದಗೆಟ್ಟಿತ್ತು. 2012ರ ನ.15ರಂದು ಪಕ್ಷದ ಪ್ರಧಾನಕಾರ್ಯದರ್ಶಿಯಾಗಿ ಆಯ್ಕೆಯಾದ ಬೆನ್ನಲ್ಲೇ, 18ನೇ ಸೆಂಟ್ರಲ್ ಕಮಿಟಿ ಸಭೆಯಲ್ಲಿ ಸೇನಾ ಚುಕ್ಕಾಣಿಯನ್ನೂ ಹಿಡಿದರು. ಹೊಸ ಆರ್ಥಿಕ ನೀತಿಗಳನ್ನು ಜಾರಿಗೆ ತಂದರು. ರಾಜಕೀಯ ಭ್ರಷ್ಟಾಚಾರ ತಡೆದು ಪಕ್ಷವನ್ನು ಹಿಡಿತಕ್ಕೆ ತೆಗೆದುಕೊಂಡರು. ಈಗ ಅದನ್ನು ಮುಂದುವರಿಸಿದ್ದಾರಷ್ಟೇ..

ಅವರ ಬಾಲ್ಯ, ಯೌವನ ಹೂವಿನ ಹಾಸಿಗೆಯೇನಾಗಿರಲಿಲ್ಲ. 1953ರ ಜೂನ್ 15ರಂದು ಬೀಜಿಂಗ್‌ನಲ್ಲಿ ಕ್ಸಿ ಜಿನ್‌ಪಿಂಗ್ ಹುಟ್ಟಿದ್ದು. ತಂದೆ ಕಮ್ಯೂನಿಸ್ಟ್ ಪಕ್ಷದ ಕ್ರಾಂತಿಕಾರಿ ನಾಯಕ ಕ್ಸಿ ಝೋಂಗ್‌ಕ್ಸನ್. 1949ರಲ್ಲಿ ಕಮ್ಯೂನಿಸ್ಟ್ ಪಕ್ಷದ ಸಂಸ್ಥಾಪಕರಲ್ಲಿ ಒಬ್ಬರಾದ ಝೋಂಗ್‌ಕ್ಸನ್ ನ್ಯಾಷನಲ್ ಪೀಪಲ್ಸ್ ಕಾಂಗ್ರೆಸ್‌ನಲ್ಲಿ ಉಪ ಪ್ರಧಾನಿ, ಉಪಾಧ್ಯಕ್ಷರಾಗಿದ್ದವರು. ತಾಯಿ ಕಿ ಕ್ಸಿನ್. ಹತ್ತು ವರ್ಷದ ಬಾಲಕ ಜಿನ್‌ಪಿಂಗ್ ಹೆನನ್‌ನ ಲಯೋಂಗ್‌ನ ಕಾರ್ಖಾನೆಯೊಂದರಲ್ಲಿ ಕೆಲಸಕ್ಕೆ ಹೋಗಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿತ್ತು. 1966ರ ಮೇ ತಿಂಗಳಲ್ಲಿ ಮಾವೋ ಸಾಂಸ್ಕೃತಿಕ ಕ್ರಾಂತಿಯ ಫಲವಾಗಿ ಶಿಕ್ಷಣ ಅರ್ಧಕ್ಕೇ ಮೊಟಕುಗೊಂಡಿತು. ಮಾವೋ ವಿರುದ್ಧದ ಚಳವಳಿಯಲ್ಲಿ ಸೆರೆವಾಸ ಅನುಭವಿಸಿ ಹೊರಬಂದ ಬಳಿಕ 1969ರಲ್ಲಿ ಕಮ್ಯೂನಿಸ್ಟ್ ಪಕ್ಷದ ಪ್ರೊಡಕ್ಷನ್ ತಂಡದ ಶಾಖಾ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿದರು.

5 ಅಡಿ 11 ಇಂಚು ಎತ್ತರ ಇರುವ ಜಿನ್‌ಪಿಂಗ್ 1980ರ ದಶಕದ ಆರಂಭದಲ್ಲಿ ಬ್ರಿಟನ್‌ನಲ್ಲಿ ಚೀನಾ ರಾಯಭಾರಿ ಆಗಿದ್ದ ಕೆ ಹುವಾ ಅವರ ಪುತ್ರಿಯನ್ನು ವಿವಾಹವಾಗಿದ್ದರು. ಕೆಲವೇ ವರ್ಷಗಳಲ್ಲಿ ಈ ದಾಂಪತ್ಯ ಮುರಿದುಬಿತ್ತು. 1987ರಲ್ಲಿ ಚೀನಾದ ಖ್ಯಾತ ಜಾನಪದ ಗಾಯಕಿ ಪೆಂಗ್ ಲಿಯುವಾನ್‌ರನ್ನು ಮದುವೆಯಾದರು. ಈ ದಾಂಪತ್ಯದಲ್ಲಿ ಅವರಿಗೆ ಕ್ಸಿ ಮಿಂಗ್‌ರೆ ಎಂಬ ಒಬ್ಬ ಪುತ್ರಿ ಇದ್ದಾಳೆ.

ಈ ಮಹತ್ವಾಕಾಂಕ್ಷಿ ನಾಯಕ ರಾಜಕೀಯವಾಗಿ (ಸರ್ವಾಧಿಕಾರಿಯಾಗಿ?) ಬೆಳೆಯುವುದಕ್ಕೆ

ಪ್ರೇರಣೆ ನೀಡಿದ ಘಟನೆಯನ್ನು ಅವರದೇ ಮಾತುಗಳಲ್ಲಿ ದಾಖಲಿಸುವುದು ಸೂಕ್ತ- ‘ಅದು ಅರವತ್ತರ ದಶಕದ ಕೊನೆಯ ಭಾಗ. ಚೀನಾದಲ್ಲಿ ಅಂದಿನ ಅಧ್ಯಕ್ಷ ಮಾವೋ ಝೆಡಂಗ್ ಸಾಂಸ್ಕೃತಿಕ ಕ್ರಾಂತಿಯನ್ನು ಹೇರಿದ್ದರು. ತಪ್ಪು ಮಾಡಿದವರನ್ನು ಚೀನಾದ ಸೀಕ್ರೆಟ್ ಪೊಲೀಸರು (ರೆಡ್ ಗಾರ್ಡ್ಗಳು) ಬಂಧಿಸಿ ಶಿಕ್ಷೆಗೊಳಪಡಿಸುತ್ತಿದ್ದರು. ನನ್ನ ತಂದೆಯೂ ಬಂಧನಕ್ಕೆ ಒಳಗಾಗಿದ್ದರು. ಅಧ್ಯಕ್ಷ ಮಾವೋ ಝೆಡಂಗ್ ಪದಚ್ಯುತಿ ಆಗ್ರಹಿಸಿ ಪ್ರತಿಭಟಿಸಿದವರ ಜತೆ 14 ವರ್ಷದವನಾದ ನಾನೂ ಬಂಧಿತನಾಗಿದ್ದೆ. ‘ನೀನು ಮಾಡಿರುವ ಅಪರಾಧ ಎಷ್ಟು ಗಂಭೀರವಾದುದು ಎಂಬ ಅರಿವು ನಿನಗಿದೆಯೇ?’ ಎಂದು ರೆಡ್ ಗಾರ್ಡ್‌ಗಳು ನನ್ನನ್ನು ಪ್ರಶ್ನಿಸಿದ್ದರು. ‘ಅದರ ಲೆಕ್ಕಾಚಾರ ನಿಮಗೇ ಇರಲಿ, ಶಿಕ್ಷೆಗೆ ಗುರಿಪಡಿಸಲು ಅಷ್ಟು ಸಾಕಾದೀತೇ?’ ಎಂದು ಮರುಪ್ರಶ್ನೆ ಎಸೆದಿದ್ದೆ. ‘ನಿನ್ನನ್ನು ನೂರು ಸಲ ಶಿಕ್ಷೆಗೆ ಗುರಿಪಡಿಸುವಷ್ಟು ದೊಡ್ಡ ತಪ್ಪೆಸಗಿದ್ದೀಯಾ..’ ಎಂದಿದ್ದರು ಅವರು. ಅವರು ನನ್ನಲ್ಲಿ ಭೀತಿ ಹುಟ್ಟಿಸಲೆಂದೇ ಆ ರೀತಿ ಹೇಳಿದ್ದರು. ಪ್ರಜಾಪ್ರಭುತ್ವದ ಹೆಸರಿನಲ್ಲಿ ಜನರ ಮೇಲೆ ಸರ್ವಾಧಿಕಾರ ಸಾಧಿಸುವ ಪ್ರಯತ್ನ ಅದಾಗಿತ್ತು. ನಾನು ರಾಜಕೀಯವಾಗಿ ಮುನ್ನಡೆಯುವುದಕ್ಕೆ ಪ್ರೇರೇಪಿಸಿದ ಘಟನೆಗಳಲ್ಲಿ ಇದೂ ಒಂದು’. ಇನ್ನು, ಬದಲಾದ ರಾಜಕೀಯ ಮತ್ತು ಭೌಗೋಳಿಕ ವಿದ್ಯಮಾನಗಳನ್ನು ಪರಿಗಣಿಸಿದಾಗ ಜಿನ್‌ಪಿಂಗ್ ಮಹತ್ವಾಕಾಂಕ್ಷೆಗೆ ಹಲವು ಸವಾಲುಗಳಿವೆ. ವಿಶೇಷವಾಗಿ ಭಾರತವೂ ‘ವಿಶ್ವ ಗುರು’ ಆಗಬೇಕು ಎಂದು ಹೊರಟಿದ್ದು, ಪ್ರಧಾನಿ ನರೇಂದ್ರಮೋದಿಯವರ ನೇತೃತ್ವದಲ್ಲಿ ಅಭಿವೃದ್ಧಿ ಪಥದಲ್ಲಿ ಮುಂದೆ ಸಾಗಿದೆ. ಹೀಗಿರುವಾಗ ಜಿನ್‌ಪಿಂಗ್ ಮಹತ್ವಾಕಾಂಕ್ಷೆ ಈಡೇರಲು ಸಾಧ್ಯವೇ ಎಂಬ ಕುತೂಹಲವಿದ್ದು, ಫಲಿತಾಂಶ ಏನೆಂಬುದನ್ನು ಕಾದುನೋಡಬೇಕಷ್ಟೆ.

••••••• ಮಾಹಿತಿ ವೇದಿಕೆ •••••••

## ಮಂದಗಾಮಿಗಳು ಮತ್ತು ರಾಷ್ಟ್ರವಾದಿಗಳ ಹಣಾಹಣಿ

ಬ್ರಿಟಿಷರು ಈಸ್ಟ್ ಇಂಡಿಯಾ ಕಂಪನಿಯ ಹೆಸರಲ್ಲಿ ಭಾರತವನ್ನು ಪ್ರವೇಶಿಸಿ ಹಂತಹಂತವಾಗಿ ಆಡಳಿತ ಸೂತ್ರಗಳನ್ನು ಹಿಡಿದುಕೊಳ್ಳಲಾರಂಭಿ ಸಿದ್ದಾಗಿನಿಂದಲೂ ಅವರ ಹಾದಿ ಸುಸೂತ್ರವೇನಾಗಿರಲಿಲ್ಲವೆಂಬುದನ್ನು ಈ ಅಂಕಣದ ಹಿಂದಿನ ಲೇಖನಗಳಲ್ಲಿ ಪ್ರಸ್ತಾವಿಸಲಾಗಿದೆ. ಬ್ರಿಟಿಷರ ಬುಡವನ್ನು ಅಲುಗಿಸಿದ್ದು 1857ರ ಮಹಾಕ್ರಾಂತಿ. ಅದರ ನಂತರವೂ ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ವಾಸುದೇವ ಬಲವಂತ ಫಡಕೆ, ದೌಲತ್‌ರಾವ್ ನಾಯಕ್, ಬಿರ್ಸಾ ಮುಂಡಾ ಮೊದಲಾದ ನೂರಾರು ಧೀರರು ತಮ್ಮದೇ ಆದ ರೀತಿಯಲ್ಲಿ ಬ್ರಿಟಿಷರ ನಿದ್ದೆಯನ್ನು ಕೆಡಿಸಿದ್ದುದೂ ನಿಜವೇ.

ಸುರಕ್ಷಾ ಕವಾಟ: ಲಾರ್ಡ್ ಡಫರಿನ್ ಭಾರತದ ವೈಸರಾಯ್ ಆಗಿದ್ದ ಕಾಲವದು. ಭಾರತದಲ್ಲಿ ಪದೇಪದೆ ಭುಗಿಲೇಳುತ್ತಿದ್ದ ಬ್ರಿಟಿಷರ ವಿರುದ್ಧದ ವಿದ್ವೇಷವನ್ನು ಅಡಗಿಸಿ ರಾಜ್ಯವನ್ನು ಉಳಿಸಿಕೊಳ್ಳಲು ಅವರಿಗೊಂದು ‘ಸುರಕ್ಷಾ ಕವಾಟ’ (ಖಚ್ಛಛಿಠಿಥ ್ಟ್ಝಿಛಿ) ಬೇಕಿತ್ತು. ಆಗ ಹಲವಾರು ಸಾರ್ವಜನಿಕ ಸಂಸ್ಥೆಗಳು ಸಾರ್ವಜನಿಕ ಕಾರ್ಯಗಳನ್ನು ಕೈಗೆತ್ತಿಕೊಂಡು ಕೆಲಸ ಮಾಡುತ್ತಿದ್ದವು. ಅವುಗಳು ಜನರ ಸಮಸ್ಯೆ ಹಾಗೂ ಭಾವನೆಗಳನ್ನು ವ್ಯಕ್ತಪಡಿಸುವ, ಚರ್ಚಿಸುವ ವೇದಿಕೆಗಳಾಗಿದ್ದವು. 1876ರಲ್ಲಿ ಕಲ್ಕತ್ತಾದಲ್ಲಿ ಸ್ಥಾಪಿತವಾದ ‘ಇಂಡಿಯನ್ ಅಸೋಸಿಯೇಷನ್’, 19ನೆಯ ಶತಮಾನದ ಐವತ್ತರ ದಶಕದಲ್ಲಿ ಮುಂಬೈಯಲ್ಲಿ ಆರಂಭಗೊಂಡ ‘ಬಾಂಬೆ ಅಸೋಸಿಯೇಷನ್’, 1886ರಲ್ಲಿ ಶುರುವಾದ ‘ಪೂನಾ ಸಾರ್ವಜನಿಕ ಸಭಾ’ ಮತ್ತು 1883ರಲ್ಲಿ ಹುಟ್ಟಿದ ‘ನ್ಯಾಷನಲ್ ಕಾನ್ಫರೆನ್ಸ್’ ಸಾರ್ವಜನಿಕ ಜಾಗೃತಿಯನ್ನು ಮೂಡಿಸುವುದರಲ್ಲಿ ಮಹತ್ತ್ವದ

ಕೊಡುಗೆ ನೀಡಿದ್ದವು. 1843ರಲ್ಲಿ 'ಬೆಂಗಾಲ್ ಬ್ರಿಟಿಷ್ ಇಂಡಿಯಾ ಸೊಸೈಟಿ' ಎಂಬ ಸಂಸ್ಥೆಯನ್ನು ಜಾರ್ಜ್ ಥಾಂಪ್ಸನ್ ಎಂಬ ಬ್ರಿಟಿಷ್ ವ್ಯಕ್ತಿ ಆರಂಭಿಸಿ ಅದನ್ನು ಬ್ರಿಟಿಷ್ ಆಡಳಿತದ ಆಸಕ್ತಿಗೆ ತಕ್ಕಂತೆ ನಡೆಸಿಕೊಂಡು ಬಂದ.ಕಾಂಗ್ರೆಸ್ ಸ್ಥಾಪನೆಯ ಉದ್ದಿಶ್ಯವನ್ನು ಅಲನ್ ಆಕ್ಟೇವಿಯನ್ ಹ್ಯೂಮ್ ಸ್ವತಃ ಹೀಗೆ ವಿವರಿಸಿದ: 'ನಮ್ಮ ಕೃತ್ಯಗಳಿಂದಲೇ ಹುಟ್ಟಿಕೊಂಡು ಬೃಹತ್ತಾಗಿ ಬೆಳೆಯುತ್ತಿದ್ದ ವಿರೋಧಿ ಶಕ್ತಿಗಳಿಂದ ಪಾರಾಗಲು ಒಂದು ಖಚ್ಚಭಿರಿಥ [illegible]ಥಿ ಅನಿವಾರ್ಯವಾಗಿತ್ತು. ನಮ್ಮ ಕಾಂಗ್ರೆಸ್ ಚಳವಳಿಗಿಂತಲೂ ಪರಿಣಾಮಕಾರಿಯಾದ ಬೇರೊಂದು ಸುರಕ್ಷಾ ಕವಾಟವನ್ನು ಸೃಷ್ಟಿಸಲು ಸಾಧ್ಯವಿರಲಿಲ್ಲ'.

1883ರ ಮಾರ್ಚ್ 1ರಂದು ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಇಂಥ ಒಂದು ಸಂಸ್ಥೆಯ ಅವಶ್ಯಕತೆಯ ಬಗ್ಗೆ ಪ್ರಸ್ತಾವಿಸಿದ ಹ್ಯೂಮ್ ಸುಮಾರು ಎರಡು ವರ್ಷ ಕಾಲ ಇದನ್ನು ಸಂಘಟಿಸಲು ನಿರಂತರ ಪ್ರಯತ್ನಿಸಿ 1885ರ ಡಿಸೆಂಬರ್ 28ರಂದು ಕಲ್ಕತ್ತಾದ ಗಣ್ಯವ್ಯಕ್ತಿ ಉಮೇಶ್ ಚಂದ್ರ ಬ್ಯಾನರ್ಜಿಯವರ ಅಧ್ಯಕ್ಷತೆಯಲ್ಲಿ ಮುಂಬೈನ ಗೋಕುಲದಾಸ್ ತೇಜ್‌ಪಾಲ್ ಸಂಸ್ಕೃತ ಕಾಲೇಜಿನಲ್ಲಿ ಅಧಿವೇಶನವನ್ನು ಆಯೋಜಿಸಿ ರಾಷ್ಟ್ರೀಯ ಕಾಂಗ್ರೆಸ್‌ಗೆ ಜನ್ಮನೀಡಿದ. ಮೊದಲ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಕೇವಲ 72 ಸದಸ್ಯರಿದ್ದರು. ದಾದಾಭಾಯಿ ನವರೋಜಿ, ಮಹಾದೇವ ಗೋವಿಂದ ರಾನಡೆ, ಸುರೇಂದ್ರನಾಥ ಬ್ಯಾನರ್ಜಿ, ಫಿರೋಜ್ ಷಹಾ ಮೆಹ್ತಾ ಮುಂತಾದ ವಿಚಾರವಂತ ಗಣ್ಯರು ಪಾಲ್ಗೊಂಡಿದ್ದ ಈ ಅಧಿವೇಶನದಲ್ಲಿ ದಾದಾಭಾಯಿಯವರು ಒಂದು ಬಗೆಯ 'ದಿಕ್ಸೂಚಿ ಭಾಷಣ'ವನ್ನೇ ಮಾಡಿದರೆನ್ನಬಹುದು: 'ಇಪ್ಪತ್ತು ಕೋಟಿ ಅಸಂತುಷ್ಟ ಜನ ಒಂದು ಕಡೆ, ಒಂದು ಸಾವಿರ ಬಂದೂಕುಧಾರಿ ಪರಕೀಯ ಪ್ರಭುಗಳು ಇನ್ನೊಂದು ಕಡೆ. ಸ್ಥಿತಿ ಹೀಗಿರುವಾಗ ಎರಡರ ನಡುವಿನ ಹೋರಾಟದ ಪರಿಣಾಮ ಏನಾದೀತೆಂದು ಹೇಳಲು ಯಾವ ಜ್ಯೋತಿಷಿಯೂ ಬೇಕಾಗಿಲ್ಲ. ಅಸಂತುಷ್ಟ ರಾಷ್ಟ್ರ ನೂರು ಸಲ ಸೋತರೂ ಮತ್ತೆ ಮತ್ತೆ ಪ್ರತೀಕಾರದ ಹೆಡೆ ಎತ್ತುವುದು. ಅಸಂತುಷ್ಟ ರಾಷ್ಟ್ರ ಅನುಭವಿಸಿದ ಒಂದೊಂದು ಸೋಲೂ ಸಾಮ್ರಾಜ್ಯವಾದಿಗಳ ಮೇಲೆ ಒತ್ತಡವನ್ನು ಹೆಚ್ಚಿಸುವುದು. ಅದರಿಂದ ಪರಕೀಯರ ದಾಸ್ಯವನ್ನು ಕಿತ್ತೊಗೆಯಲು ಜನ ಇನ್ನಷ್ಟು ಕಾತರರಾಗುವರು'. ಆಗಿನ ಸಂದರ್ಭಗಳಲ್ಲಿ ಇಂಥ ಹೇಳಿಕೆ ಹೆಚ್ಚು ದಿಟ್ಟತನದ್ದೂ, ಮಹತ್ವಪೂರ್ಣವೂ ಆಗಿತ್ತೆಂಬುದು ಮುಖ್ಯವಾಗಿ ಗಮನಿಸಬೇಕಾದ್ದು.

ಮಂದಗಾಮಿ ವರ್ಸಸ್ ತೀವ್ರಗಾಮಿ: ಆರಂಭದ ದಿನದಿಂದ 1905ರವರೆಗೆ ಭಾರತ ರಾಷ್ಟ್ರೀಯ ಕಾಂಗ್ರೆಸ್ ಫಿರೋಜ್ ಷಹಾ ಮೆಹ್ತಾ, ರಾನಡೆ, ಬ್ಯಾನರ್ಜಿ ಮೊದಲಾದ ಉದಾರವಾದಿ ಮಂದಗಾಮಿ ನಾಯಕರ ಹಿಡಿತದಲ್ಲಿಯೇ ಇತ್ತು. ಅವರು ಬ್ರಿಟಿಷ್ ಆಡಳಿತದ ಸಂವಿಧಾನದ ಚೌಕಟ್ಟಿನಲ್ಲೇ ಇರಬೇಕೆಂದು ಪಟ್ಟುಹಿಡಿದಿದ್ದರು. ಈ ಮಂದಗಾಮಿ ಉದಾರವಾದಿಗಳು ಸುಧಾರಣೆ ಹಾಗೂ ಸವಲತ್ತುಗಳಿಗಾಗಿ ಅರ್ಜಿಗಳನ್ನು ಹಿಡಿದುಕೊಂಡು ಬ್ರಿಟಿಷ್ ಸರ್ಕಾರದ ಮುಂದೆ ಕೈಕಟ್ಟಿ ನಿಲ್ಲುತ್ತಿದ್ದುದು ಸ್ವಾಭಿಮಾನಿ ಭಾರತೀಯರಿಗೆ ಸರಿ ಎನಿಸಲಿಲ್ಲ. ಮಂದಗಾಮಿಗಳಿಗೆ ಬ್ರಿಟಿಷರು ಶತ್ರುಗಳು ಎನಿಸಲಿಲ್ಲ. ಅವರು ಭಾರತದ ಭಾಗ್ಯವಿಧಾತರು ಎಂದು ನಂಬಿದ್ದರು. ವಾರ್ಷಿಕ ಅಧಿವೇಶನಗಳಲ್ಲಿ ಠರಾವು ಪಾಸುಮಾಡಿ ಸರ್ಕಾರಕ್ಕೆ ಕಳಿಸುವುದು ಮುಖ್ಯ ಕೆಲಸವಾಗಿತ್ತು. ಇದೆಲ್ಲ ಬ್ರಿಟಿಷ್ ಸರ್ಕಾರದ ಏಜೆಂಟ್, ಜಾಣ ಮುತ್ಸದ್ದಿ

ಎ.ಒ. ಹ್ಯೂಮ್ ಬಯಕೆಯಂತೆಯೇ ಸಾಗುತ್ತಿತ್ತು ಎಂಬುದರಲ್ಲಿ ಅನುಮಾನಕ್ಕೆ ಎಡೆ ಇಲ್ಲ.

ಆದರೆ ತೀವ್ರವಾದಿಗಳು ಎಂದು ಕರೆಸಿಕೊಂಡ ರಾಷ್ಟ್ರವಾದಿಗಳು ಒಳಗೊಳಗೇ ಕುದಿಯುತ್ತಿದ್ದರು. ಭಾರತೀಯರನ್ನು ನಿಕೃಷ್ಟವಾಗಿ ಕಂಡು ಅಮಾನುಷವಾಗಿ ನಡೆಸಿಕೊಳ್ಳುತ್ತಿದ್ದ ಬ್ರಿಟಿಷರ ಬಗ್ಗೆ ರಾಷ್ಟ್ರವಾದಿಗಳಿಗೆ ಸರಿಯಾದ ಪರಿಕಲ್ಪನೆ ಇತ್ತು. ಬ್ರಿಟಿಷರೊಂದಿಗಿನ ಹೋರಾಟವೆಂದರೆ ಅದು ಸ್ವಧರ್ಮ ಮತ್ತು ಸ್ವರಾಜ್ಯಗಳ ಹೋರಾಟ ಎಂಬ ಸಂಗತಿ 1857ರ ಸಂಗ್ರಾಮದಿಂದಲೂ ಹೆಚ್ಚು ಪ್ರಚಲಿತಗೊಂಡಿದ್ದ ಸಂಗತಿ. ಮಂದಗಾಮಿ ಉದಾರವಾದಿಗಳು ಪಾಶ್ಚಾತ್ಯ ಸಂಸ್ಕೃತಿಯನ್ನು ವೈಭವೀಕರಿಸುತ್ತಿದ್ದುದು ರಾಷ್ಟ್ರವಾದಿಗಳಿಗೆ ಅಪಥ್ಯವಾಗಿತ್ತು. ಹೀಗಾಗಿ ರಾಷ್ಟ್ರವಾದಿಗಳು ಭಾರತೀಯರ ವೇದಶಾಸ್ತ್ರಗಳ ಜ್ಞಾನಪರ್ವ, ಅಶೋಕ-ಚಂದ್ರಗುಪ್ತರ ಆಡಳಿತ ಕಾಲದ ವೈಭವ, ರಾಣಾ ಪ್ರತಾಪ ಸಿಂಹ, ಶಿವಾಜಿ, ರಾಣಿ ಲಕ್ಷ್ಮೀಬಾಯಿಯರ ಧೀರೋದಾತ್ತ ಹೋರಾಟದ ಕಥನ ಹಾಗೂ ಭಾರತೀಯರ ಆಧ್ಯಾತ್ಮಿಕ ಶಕ್ತಿಯ ಹೆಮ್ಮೆಯ ಹಿನ್ನೆಲೆಯಿಂದ ಪ್ರೇರಿತರಾಗಿ ಕಾರ್ಯಪ್ರವೃತ್ತರಾಗಿದ್ದರು.

ಮೆಹ್ತಾ, ರಾನಡೆ, ಗೋಖಲೆ, ಬ್ಯಾನರ್ಜಿ ಮುಂತಾದ ಉದಾರವಾದಿಗಳಿಗೂ ಬಾಲಗಂಗಾಧರ ತಿಲಕ್, ಲಾಲಾ ಲಜಪತ್‌ರಾಯ್, ಬಿಪಿನ್ ಚಂದ್ರ ಪಾಲರಂಥ ರಾಷ್ಟ್ರವಾದಿ ತೀವ್ರಗಾಮಿಗಳಿಗೂ ಎಣ್ಣೆ-ಸೀಗೇಕಾಯಿ ನಂಟು. ಆದರೆ ಆ ದಿನಗಳ ಈ ಸೆಣಸಾಟದಲ್ಲಿ ಮಂದಗಾಮಿಗಳದೇ ಮೇಲುಗೈ. ಮಹಾರಾಷ್ಟ್ರ ಮತ್ತು ಬಂಗಾಳಗಳು ಕಾಂಗ್ರೆಸ್ ಚಟುವಟಿಕೆಗಳಲ್ಲಿ ಹೆಚ್ಚಿನ ಆಸಕ್ತಿ ವಹಿಸಿದ್ದವು. ಮದ್ರಾಸ್ ಪ್ರಾಂತವೂ ಅಷ್ಟೇ ಉತ್ಸಾಹದಿಂದ ಪಾಲ್ಗೊಳ್ಳುತ್ತಿತ್ತು. ಮಹಾರಾಷ್ಟ್ರ ಸಾರ್ವಜನಿಕ ಚಟುವಟಿಕೆಗಳಿಗೆ ಹೆಸರಾಗಿತ್ತು. ರಾನಡೆ ಮುಂತಾದವರು ಈ ಚಟುವಟಿಕೆಗಳ ಅಧ್ವರ್ಯುಗಳು. ಆದರೆ ಲೋಕಮಾನ್ಯ ತಿಲಕರು ಕಾಂಗ್ರೆಸ್‌ಗೆ ಮತ್ತು ದೇಶಕ್ಕೆ ಸ್ವಾಭಿಮಾನ, ಸಾಹಸಗಳ ದೀಕ್ಷೆ ನೀಡಿದವರು. 'ಕೇಸರಿ' ಮತ್ತು 'ಮರಾಠಾ' ಪತ್ರಿಕೆಗಳು ತಿಲಕರ ವಿಚಾರವಾಹಕಗಳಾಗಿದ್ದು ಜನಮನದಲ್ಲಿ ರಾಷ್ಟ್ರೀಯ ದೃಷ್ಟಿಯನ್ನು ಮೂಡಿಸುವುದರಲ್ಲಿ ಮಹತ್ವದ ಪಾತ್ರ ವಹಿಸಿದವು.

ಬಂಗಾಳ ವಿಭಜನೆಯ ಪವಾಡ: ಅತ್ತ ಬಂಗಾಳದಲ್ಲಿ ಸುರೇಂದ್ರನಾಥ ಬ್ಯಾನರ್ಜಿ ಪ್ರಚಂಡ ಭಾಷಣಗಳಿಂದ ಯುವಸಮೂಹದ ಸ್ವಾಭಿಮಾನವನ್ನು ಬಡಿದೆಬ್ಬಿಸಿದ್ದರು. 'ಬೆಂಗಾಲಿ' ಎಂಬ ತಮ್ಮ ಪತ್ರಿಕೆಯಲ್ಲಿ ಅವರು ಬರೆಯುತ್ತಿದ್ದ ಲೇಖನಗಳೂ ಸ್ಫೂರ್ತಿಪ್ರದವಾಗಿದ್ದವು. ತೀವ್ರಗಾಮಿಗಳಲ್ಲಿ ಬಂಗಾಳಿಗಳಾದ ಬಿಪಿನ್ ಚಂದ್ರ ಪಾಲ್ ಮತ್ತು ಅರವಿಂದ ಘೋಷ್‌ರ ಪಾತ್ರ ಬಹಳ ಮಹತ್ವದ್ದಾಗಿದ್ದಂತೆ ಪಂಜಾಬಿನ ಲಾಲಾ ಲಜಪತ್‌ರಾಯರೂ ಅಷ್ಟೇ ಪ್ರಮುಖರಾಗಿದ್ದರು. ಆದರೆ ತಮಿಳುನಾಡು ತಿನ್ನವೇಲಿಯ ವಿ.ಒ. ಚಿದಂಬರಂ ಪಿಳ್ಳೆಯವರ ಪಾತ್ರವನ್ನು ರಾಷ್ಟ್ರಮಟ್ಟದಲ್ಲಿ ಅಷ್ಟರಮಟ್ಟಿಗೆ ಗುರುತಿಸದಿರುವುದು ಖೇದದ ಸಂಗತಿ.

ತೀವ್ರಗಾಮಿ ಎಂದು ಹಣೆಪಟ್ಟಿ ಹಚ್ಚಲ್ಪಟ್ಟಿದ್ದ ರಾಷ್ಟ್ರವಾದಿಗಳ ವಿಚಾರಗಳಿಗೆ ಪುಷ್ಟಿ ದೊರೆತು, ರಾಷ್ಟ್ರೀಯ ವಿಚಾರಗಳು ರಾಷ್ಟ್ರಾದ್ಯಂತ ಒಮ್ಮೆಲೆ ಪಸರಿಸಲು ಕಾರಣ ಲಾರ್ಡ್ ಕರ್ಜನ್ 1905ರಲ್ಲಿ ಮಾಡಿದ ಬಂಗಾಳ ವಿಭಜನೆ! ಅದು ಕಾಂಗ್ರೆಸ್‌ನಲ್ಲಿ ರಾಷ್ಟ್ರವಾದ ಬಲಗೊಳ್ಳಲು ದಾರಿ ಮಾಡಿತು. ರಾಷ್ಟ್ರವಾದಿಗಳ ನೇತೃತ್ವವನ್ನು ಲಾಲ್, ಬಾಲ್, ಪಾಲ್, ಅರವಿಂದ ಘೋಷ್ ವಹಿಸಿದ್ದರು. ಆ ದಿನಗಳಲ್ಲಿ ರೋಮಾಂಚನ ಉಂಟುಮಾಡಿದ್ದ, ಆ ಕಾಲಕ್ಕೆ ಕಾಂಗ್ರೆಸ್ಸಿಗೆ ಒಂದು ರಾಷ್ಟ್ರೀಯ ದೃಷ್ಟಿಯನ್ನು ನೀಡಿದ ಈ ಚತುಷ್ಟಯ ಅಪಾರ ಜನಪ್ರಿಯತೆಯನ್ನೂ ಗಳಿಸಿತು.

ಮಂದಗಾಮಿ ನಾಯಕರು ಅಧ್ಯಯನಶೀಲರು, ಚಿಂತಕರು, ವಾಗ್ಮಿಗಳೂ ಆಗಿದ್ದರು. ವೇದಿಕೆಗಳ ಮೇಲೆ ಚಿಂತನಶೀಲ ಭಾಷಣಗಳನ್ನು ಮಾಡುವುದರಲ್ಲಿ, ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವುದರಲ್ಲಿ ಅಗ್ರಗಣ್ಯರಾಗಿದ್ದರು. ಈ ಗುಂಪಿಗೆ ಸೇರಿದ್ದ ಇನ್ನೊಂದು ದೊಡ್ಡ ಹೆಸರು ಗೋಪಾಲಕೃಷ್ಣ ಗೋಖಲೆಯವರದು. ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಇವರು ರಾನಡೆಯವರ ಶಿಷ್ಯರು, ಪೂನಾ ಸಾರ್ವಜನಿಕ ಸಭಾ ಕಾರ್ಯದರ್ಶಿ. ರಾನಡೆಯವರ ಪ್ರೀತಿಯ ಶಿಷ್ಯ, ಉತ್ತಮ ವಾಗ್ಮಿ. ಅವರು ಬ್ರಿಟಿಷ್ ಸರ್ಕಾರದ ಮುಂದೆ ಅಹವಾಲುಗಳನ್ನಿರಿಸುವುದರಲ್ಲಿ ಆಸಕ್ತರು. ಅರ್ಜಿಗಳನ್ನು ಗುಜರಾಯಿಸಿ ಬ್ರಿಟಿಷ್ ಅಧಿಕಾರಿಗಳ ಮನ ಒಲಿಸಿ ಜನರಿಗೆ ಅನುಕೂಲಗಳನ್ನುಂಟುಮಾಡಬೇಕೆಂಬುದು ಅವರ ವಾದಸರಣಿ. ಇಡೀ ಮಂದಗಾಮಿ ಗುಂಪಿನ ವಿಚಾರ ಇದೇ ಆಗಿತ್ತು.

ಮಂದಗಾಮಿಗಳ ಅರ್ಜಿ, ಬಿನ್ನವತ್ತಳೆ, ಪ್ರಾರ್ಥನೆಗಳ ಧೋರಣೆ ತೀವ್ರಗಾಮಿಗಳ ತೀವ್ರಟೀಕೆಗೆ ಒಳಗಾಗಿತ್ತು. ಆಗ ಮಂದಗಾಮಿಗಳ ನಿಲುವನ್ನು ಪ್ರತಿಪಾದಿಸಿ ತೀವ್ರಗಾಮಿಗಳಿಗೆ ಉತ್ತರ ನೀಡಿದವರು ಗೋಖಲೆಯವರು: 'ಮಂದಗಾಮಿಗಳೆಂದರೆ ಭಿಕ್ಷೆ ಬೇಡುವ ಭಿಕಾರಿಗಳಲ್ಲ. ನಮ್ಮ ದೇಶದ ಹಿತರಕ್ಷಣೆಯನ್ನು ಬಹು ಎಚ್ಚರಿಕೆಯಿಂದ ಮಾಡಬೇಕಿದೆ. ದೇಶಕ್ಕಾಗಿ ಸರ್ಕಾರದಿಂದ ಸಿಗಬಹುದಾದ ಎಲ್ಲ ಲಾಭಗಳನ್ನು ದೊರಕಿಸಿಕೊಡುವುದು ನಮ್ಮ ಧ್ಯೇಯವಾಗಿದೆ... ನಮಗಿರುವ ಸಾಧ್ಯತೆಗಳಿಗೆ ಮಿತಿ ಇದೆ. ಅದನ್ನು ದಾಟಲಾರೆವು. ನಮಗೆ ಕೆಲವೊಮ್ಮೆ ನಿರಾಶೆಯೂ ಆಗಬಹುದು. ನಮ್ಮ ಪ್ರಯತ್ನದ ಫಲ ನಮಗಿಂದೇ ದೊರೆಯದಿರಬಹುದು. ನಮ್ಮ ಮುಂದಿನ ಪೀಳಿಗೆಗಳು ನಮ್ಮ ಕಾರ್ಯದ ಫಲ ಪಡೆಯಬಹುದು'.ಕಾಂಗ್ರೆಸ್ ಇಬ್ಭಾಗ: ಲೋಕಮಾನ್ಯ ತಿಲಕರು ಈ ನಿಲುವಿಗೆ ತದ್ವಿರುದ್ಧವಾಗಿದ್ದರು. ಮಂದಗಾಮಿಗಳ ವಿಧಾನ ನಿಜಕ್ಕೂ ಮಂದಗತಿಯದಾಗಿದ್ದು ಅದು ನಿರೀಕ್ಷಿತ ಫಲವನ್ನು ನೀಡದೆಂಬುದು ಅವರ ವಾದ. 'ಶಠಂ ಪ್ರತಿಶಾಠ್ಯಂ' ಎಂದು ಇಂಗ್ಲಿಷರಿಗೆ ದಂಡಪ್ರಯೋಗ ಮಾಡಬೇಕು, ಅವರಿಗರ್ಥವಾಗುವ ಭಾಷೆಯಲ್ಲಿಯೇ ಉತ್ತರಿಸಿ ಅವರನ್ನು ಮಣಿಸಬೇಕೆಂಬುದು ಅವರ ವಿಚಾರ. ಗೋಖಲೆ, ರಾನಡೆಯವರಿಗಿಂತ ಇವರು ಭಿನ್ನಹಾದಿ ತುಳಿದರು. ಅವರು ಕೇವಲ ಹೇಳಿಕೆ, ಭಾಷಣಗಳಿಂದ ತೃಪ್ತರಾಗದೆ ರಾಜಕೀಯ ಕಾರ್ಯಕ್ರಮ ಗಳನ್ನು ಅನುಸರಿಸಿ ಯುವಜನರಲ್ಲಿ ಕ್ಷಾತ್ರತೇಜವನ್ನು ತುಂಬಿದರು. ಗೋಖಲೆಯವರ ನಿಲುವಿಗೆ ವಿರುದ್ಧವಾಗಿದ್ದ ಅವರ ಅಭಿಪ್ರಾಯವನ್ನು 'ಕೇಸರಿ' ಪತ್ರಿಕೆಯ ಲೇಖನದ ಒಂದು ಪ್ಯಾರಾದಲ್ಲಿ ಅವರು ದೇಶವಾಸಿಗಳಿಗೆ ನೀಡಿದ ಕರೆಯ ಮೂಲಕ ಅರಿಯಬಹುದು: 'ಇಂದಿನ ರಾಜ್ಯ ಪದ್ಧತಿಯು ನಿಮಗೆ ಸಹ್ಯವಾಗದಿದ್ದರೆ ಅದಕ್ಕೆ ನಿಮ್ಮ ವಿರೋಧವನ್ನು ಕೃತಿಯ ಮೂಲಕ ತೋರಿಸಬೇಕು! ಕೇವಲ ಬಾಯಿಮಾತುಗಳಿಂದ ಏನೂ ಪ್ರಯೋಜನವಿಲ್ಲ! ನಮ್ಮ ಗುರಿಯನ್ನು ಸಾಧಿಸಬೇಕಾದರೆ ಇಂಗ್ಲೆಂಡ್ ಹಾಗೂ ಭಾರತ ದೇಶಗಳಲ್ಲಿ ಎಡೆಬಿಡದೆ ಒಂದೇಸಮ ಆಂದೋಲನ ನಡೆಸಬೇಕು. ಬ್ರಿಟಿಷರು ಈ ಆಂದೋಲನಗಳಿಂದ ತತ್ತರಿಸಬೇಕು. ಭಾರತೀಯರನ್ನು ಕುರಿತ ಅವರ ಅಸಡ್ಡೆಯ ಧೋರಣೆ ಹೋಗಿ, ನಮ್ಮತ್ತ ಗಮನಹರಿಸಬೇಕೆಂಬ ಭಾವ ಅವರಲ್ಲಿ ಮೂಡುವಂತಾಗಬೇಕು. ಈ ರೀತಿಯಲ್ಲಿ ಬ್ರಿಟಿಷರನ್ನು ಇಕ್ಕಟ್ಟಿನಲ್ಲಿ ಸಿಲುಕಿಸುವುದಕ್ಕಾಗಿಯೇ ಕಾಂಗ್ರೆಸ್ ಸ್ಥಾಪಿತಗೊಂಡಿದೆ' ಎಂದು ತಮ್ಮ ನಿರಂತರ ಸಂಘರ್ಷದ ಹಾದಿಯನ್ನು ಜಗಜ್ಜಾಹೀರುಗೊಳಿಸಿ ರಾನಡೆ, ಗೋಖಲೆಯವರ ಉದಾರವಾದಕ್ಕೆ ಸವಾಲೆಸೆದರು. 'ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು' ಎಂದು ಘೋಷಿಸಿ ಭಾರತೀಯರನ್ನು ಹೋರಾಟದ ಹಾದಿಗೆ ಹಚ್ಚಿದರು. ಆದ್ದರಿಂದಲೇ ಅವರು 'ಭಾರತದ ಅಸಂತೋಷದ ಜನಕ' ಎಂಬ ವ್ಯಾಲೆಂಟೈನ್ ಚಿರೋಲ್‌ನ ಮಾತಿನಲ್ಲಿ ಬ್ರಿಟಿಷರ ಅಭಿಪ್ರಾಯ ಪ್ರತಿಬಿಂಬಿತವಾಯಿತು.ಮಂದಗಾಮಿ-ತೀವ್ರಗಾಮಿ ಬಣಗಳ ನಡುವಿನ ಈ ಹೋರಾಟ

ಕ್ಲೈಮ್ಯಾಕ್ಸ್ ಹಂತಕ್ಕೆ ಮುಟ್ಟಿದ್ದು 1907ರಲ್ಲಿ ನಡೆದ ಸೂರತ್ ಅಧಿವೇಶನದಲ್ಲಿ. ಕಾಂಗ್ರೆಸ್ ಅಧ್ಯಕ್ಷಪೀಠದಿಂದ ರಾಸ್‌ಬಿಹಾರಿ ಘೋಷ್ ಮಾತನಾಡಲು ಎದ್ದುನಿಂತಾಗ ತಿಲಕರು ತಾವು ಮೊದಲೇ ನೀಡಿದ ತಿದ್ದುಪಡಿ ಕುರಿತು ಮಾತನಾಡಲು ಅವಕಾಶ ಕೊಡಬೇಕೆಂದರು. ಅಲ್ಲಿಂದ ಶುರುವಾಯಿತು ಲಟಾಪಟಿ. ಅರವಿಂದ ಘೋಷ್ ತಮ್ಮ ಸ್ಪಷ್ಟ ರಾಷ್ಟ್ರೀಯ ವಿಚಾರಗಳಿಂದ ಮಿಂಚಿದ ಈ ಸಂದರ್ಭದಲ್ಲಿ ವಿದರ್ಭದ ಡಾ. ಶಿವರಾಮ ಬಾಲಕೃಷ್ಣ ಮೂಂಜೆಯವರ ನಾಯಕತ್ವದಲ್ಲಿ ಬಂದಿದ್ದ ರಾಷ್ಟ್ರವಾದಿ ಕಾಂಗ್ರೆಸ್ಸಿಗರು ದೊಣ್ಣೆಗಳನ್ನು ಹಿಡಿದು ಕಣಕ್ಕಿಳಿದರು. ಎರಡು ಬಣಗಳ ನಡುವೆ ಕೈ ಕೈ ಮಿಲಾಯಿಸಿತು. ಇದರ ಪರಿಣಾಮವಾಗಿ ಕಾಂಗ್ರೆಸ್ ಇಬ್ಭಾಗವಾಯಿತು. ಕಾಂಗ್ರೆಸ್ಸಿನಲ್ಲಿ ಮಂದಗಾಮಿ ಗಳು ಅಂದು ವಿಜಯಶಾಲಿಗಳಾದರೂ ಯುವಜನಾಂಗದಲ್ಲಿ ಹೋರಾಟದ ಕೆಚ್ಚನ್ನು ಮೂಡಿಸುವುದರಲ್ಲಿ ತಿಲಕ್, ಲಜಪತರಾಯ್, ಬಿಪಿನ್ ಚಂದ್ರ ಪಾಲ್, ಅರವಿಂದ ಘೋಷ್, ವಿ.ಒ. ಚಿದಂಬರಂ ಪಿಳ್ಳೈಯವರ ಪಾತ್ರ ಪ್ರಮುಖವಾಯಿತು.

••••••• ಮಾಹಿತಿ ವೇದಿಕೆ •••••••

Ť *ಯ್ಯಾರಿವರು ನಿಮಗೆ ಗೊತ್ತೇ ಬನ್ನಿ ನೋಡೋಣ*✍

ಪುಷ್ಪಾ ಕಪಿಲಾ ಹಿಂಗೊರಾನಿ 1979 ರಲ್ಲಿ ಸುಪ್ರೀಂ ಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಸಲ್ಲಿಸಿದ ಭಾರತೀಯ ವಕೀಲರು. ಕಪಿಲಾ ಮತ್ತು ಅವರ ಪತಿ ಕೈದಿಗಳ ಪರವಾಗಿ ಹೇಬಿಯಸ್ ಕಾರ್ಪಸ್ ಅರ್ಜಿಯನ್ನು ಸಲ್ಲಿಸಿದರು, ಅದರ ನಂತರ ಪ್ರಕರಣಕ್ಕೆ ಸಂಬಂಧಿಸಿದ 40 ಸಾವಿರ ಖೈದಿಗಳು ಉನ್ನತ ನ್ಯಾಯಾಲಯದಿಂದ ಬಿಡುಗಡೆಗೊಂಡರು. ಈ ಪ್ರಕರಣ ಕಪಿಲ ಅವರಿಗೆ ‘ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯ ತಾಯಿ’ ಎಂಬ ಪ್ರಶಸ್ತಿಯನ್ನು ತಂದುಕೊಟ್ಟಿತು. ಬ್ರಿಟನ್‌ನ ಕಾರ್ಡಿಫ್ ಲಾ ಸ್ಕೂಲ್‌ನಿಂದ ಪದವಿ ಪಡೆದ ಮೊದಲ ಭಾರತೀಯ ಮಹಿಳೆ ಕೂಡ ಹೌದು. 2013 ರಲ್ಲಿ 86ನೇ ವಯಸ್ಸಿನಲ್ಲಿ ನಿಧನರಾದರು. ಸುಪ್ರೀಂಕೋರ್ಟ್ ಕಪಿಲಾ ಭಾವಚಿತ್ರವನ್ನು ಗ್ರಂಥಾಲಯದಲ್ಲಿ ಸ್ಥಾಪಿಸಿದೆ.

••••••• ಮಾಹಿತಿ ವೇದಿಕೆ •••••

ಮರಾಠಿ ಸಾಹಿತ್ಯದ ಆಧುನಿಕ ಲೇಖಕರಲ್ಲಿ ಸಾನಿಯಾ ಕೂಡ ಒಬ್ಬರು. 1952ರ ನವೆಂಬರ್ ಹತ್ತರಂದು ಮಹಾರಾಷ್ಟ್ರದ ಸಾಂಗ್ಲಿಯಲ್ಲಿ ಜನಿಸಿದ ಅವರು ಮುಂಬಯಿಯಲ್ಲಿ ಎಂ.ಕಾಂ. ಪದವಿ ಪಡೆದರು. ಶಾಲಾ ಬಾಲಕಿಯಾಗಿದ್ದಾಗಿ ನಿಂದಲೇ ಅವರ ಬರವಣಿಗೆ ಆರಂಭವಾಯಿತು. ಅವರು ಒಟ್ಟು 13 ಕಥಾ ಸಂಕಲನಗಳನ್ನು ಹೊರತಂದಿದ್ದಾರೆ. ‘ಸ್ಥಳಾಂತರ, ‘ಆವರ್ತನ’, ‘ಅವಕಾಶ’ ಎಂಬ ಮೂರು ಕಾದಂಬರಿಗಳು ಪ್ರಕಟವಾಗಿವೆ. ಅದರ ಜೊತೆಗೆ ಲಲಿತಪ್ರಬಂಧ, ರೇಡಿಯೋ ನಾಟಕ, ಅನುವಾದ, ಪ್ರವಾಸಕಥನ ಮುಂತಾದ ಪ್ರಕಾರಗಳಲ್ಲೂ ಅವರು ಕೃತಿಗಳನ್ನು ರಚಿಸಿದ್ದಾರೆ. ‘ಮನುಷ್ಯ ಸಂಬಂಧಗಳೇ ನನ್ನ ಬರಹದ ಕೇಂದ್ರಸೂತ್ರ’ ಎಂದು ಅಭಿಪ್ರಾಯಪಡುತ್ತಾರೆ ಅವರು.

••••••• ಮಾಹಿತಿ ವೇದಿಕೆ ••••

ದೇಶದ ಎರಡನೇ ಮಹಿಳಾ ವಿದೇಶಾಂಗ ಕಾರ್ಯದರ್ಶಿ ಎಂಬ ಹೆಗ್ಗಳಿಕೆ ಹೊಂದಿರುವವರು ನಿರುಪಮಾ ರಾವ್. 1950ರ ಡಿ. 6ರಂದು ಕೇರಳದಲ್ಲಿ ಜನಿಸಿದ ಅವರು ಮರಾಠವಾಡ ವಿಶ್ವವಿದ್ಯಾನಿಲಯದಿಂದ ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. 1973ನೇ ಬ್ಯಾಚಿನ ಐಎಫ್‌ಎಸ್ ಅಧಿಕಾರಿಯಾಗಿರುವ ಅವರು, 2006ರಲ್ಲಿ ಚೀನಾಕ್ಕೆ ಭಾರತೀಯ ರಾಯಭಾರಿಯಾಗಿ ನೇಮಕಗೊಂಡಿದ್ದರು. 2009ರಲ್ಲಿ ಅಮೆರಿಕಕ್ಕೆ ಭಾರತದ ರಾಯಭಾರಿಯಾಗಿದ್ದರು. ಇದಲ್ಲದೆ ಶ್ರೀಲಂಕಾ, ಪೇರು ಸೇರಿ ಹಲವು ದೇಶಗಳಿಗೆ ಭಾರತದ ವಿಶೇಷ ರಾಜತಾಂತ್ರಿಕ ಪ್ರತಿನಿಧಿಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

••••••• ಮಾಹಿತಿ ವೇದಿಕೆ ••••

ಸಿಪಾಯಿ ದಂಗೆಗೂ ಮೊದಲೇ ಬ್ರಿಟಿಷರ ವಿರುದ್ಧ ಹೋರಾಡಿದ ಪ್ರಥಮ ಮಹಿಳೆ ರಾಣಿ ವೇಲು ನಾಚಿಯಾರ್. ತಮಿಳುನಾಡಿನ ಶಿವಗಂಗೈನ ರಾಜ ಮನೆತನದಲ್ಲಿ ಹುಟ್ಟಿದ ನಾಚಿಯಾರ್ ತಂದೆ-ತಾಯಿಗೆ ಒಬ್ಬಳೇ ಮಗಳು. ಗಂಡುಮಕ್ಕಳಿಲ್ಲದ ಕಾರಣ ಇವಳಿಗೆ ಕತ್ತಿವರಸೆ, ಕುದುರೆಸವಾರಿ, ಬಿಲ್ಲುಗಾರಿಕೆಗಳಲ್ಲದೆ ಬೇರೆ ರೀತಿಯ ಆಯುಧಗಳನ್ನೂ ಉಪಯೋಗಿಸುವ ವಿದ್ಯೆಯನ್ನು ಕಲಿಸಲಾಗಿತ್ತು. ಆ ಕಾಲದಲ್ಲೇ ಉರ್ದು, ಫ್ರೆಂಚ್, ಇಂಗ್ಲಿಷ್ ಸೇರಿದಂತೆ ಹಲವಾರು ಭಾಷೆಗಳನ್ನೂ ಮಾತಾಡುತ್ತಿದ್ದ ವೇಲು ನಾಚಿಯಾರ್, ಮೊದಲ ಬಾರಿಗೆ ಮಾನವಬಾಂಬ್ ಉಪಯೋಗಿಸಿದ ರಾಣಿ. 1780ರಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿ ಗೆಲುವು ಸಾಧಿಸಿದ ವೇಲು, 1790ರಲ್ಲಿ ಮಗಳಿಗೆ ರಾಜ್ಯವನ್ನು ಬಿಟ್ಟುಕೊಟ್ಟು ಸಂನ್ಯಾಸ ಸ್ವೀಕರಿಸಿದಳು.

••••••• ಮಾಹಿತಿ ವೇದಿಕೆ ••••

ಸ್ವಾತಂತ್ರ್ಯ ಹೋರಾಟದಲ್ಲಿ ಹಾಗೂ ಅದಕ್ಕೂ ಮೊದಲು ನಡೆದ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದ ಪ್ರಮುಖರೆಂದರೆ ಬಳ್ಳಾರಿ ಸಿದ್ದಮ್ಮ. ಅವರು ಹಾವೇರಿಯ ದುಂಡಸಿ ಗ್ರಾಮದಲ್ಲಿ 1900ರಲ್ಲಿ ಜನಿಸಿದರು. ತಂದೆ ಬಸೆಟಪ್ಪ ಮತ್ತು ಶಿವಮ್ಮ. ವಿದ್ಯಾಭ್ಯಾಸ ಮಾಡಬೇಕೆಂಬ ಇಚ್ಛೆಯಿದ್ದರೂ ತಂದೆ-ತಾಯಿ ವಿರೋಧಿಸಿದರು. ಆದರೂ ನಾಲ್ಕನೇ ತರಗತಿಯ ತನಕ ವ್ಯಾಸಂಗ ಮಾಡಿದರು. ಪ್ರಾಪ್ತ ವಯಸ್ಸಿಗೆ ಬರುತ್ತಲೇ ಬಳ್ಳಾರಿಯ ಮುರುಗಪ್ಪನವರ ಜತೆ ವಿವಾಹವಾಯಿತು. ಆಗ ಸ್ವಾತಂತ್ರ್ಯ ಆಂದೋಲನವು ಇಡೀ ದೇಶವನ್ನು ವ್ಯಾಪಿಸಿತ್ತು. ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ದಮ್ಮನವರ ಮನಸ್ಸು ತುಡಿಯುತ್ತಿತ್ತು. ಕರ್ನಾಟಕದಲ್ಲಿ ನಡೆದ ನಾನಾ ಚಳವಳಿಗಳಲ್ಲಿ ಅವರು ಪಾಲ್ಗೊಂಡರು. ರಾಜ್ಯ ಪುನರ್ವಿಂಗಡಣಾ ಆಯೋಗದ ಕರಡು ವರದಿಯ ಪ್ರಕಾರ ಬಳ್ಳಾರಿ ಆಂಧ್ರಕ್ಕೆ ಸೇರುವುದಿತ್ತು. ಇದನ್ನು ವಿರೋಧಿಸಿದವರಲ್ಲಿ ಸಿದ್ದಮ್ಮನವರು ಪ್ರಮುಖರು.

••••••• ಮಾಹಿತಿ ವೇದಿಕೆ ••••

ಖ್ಯಾತ ಜರ್ಮನ್ ಲೇಖಕಿ ಐಸೋಲ್ಡ್ ಕರ್ಜ್ (1853-1944). ಸಣ್ಣಕಥೆಗಳನ್ನೂ ಭಾವಗೀತೆಗಳನ್ನೂ ಕಾದಂಬರಿಗಳನ್ನೂ ಬರೆದಿದ್ದಾರೆ. ಪ್ರಸಿದ್ಧ ಕಾದಂಬರಿಕಾರ ಹರ್ಮನ್ ಕರ್ಜ್ ಈಕೆಯ ತಂದೆ. ಬಾಲ್ಯದಿಂದಲೂ ತಾಯಿಯ ಪ್ರಭಾವ ಹಾಗೂ ಶಿಕ್ಷಣದಲ್ಲಿ ಬೆಳೆದದ್ದರಿಂದ ಸಾಹಿತ್ಯದಲ್ಲಿ ಅಭಿರುಚಿಯುಂಟಾಯಿತು. ಚಿಕ್ಕವಯಸ್ಸಿನಲ್ಲೇ ತಂದೆಯನ್ನು ಕಳೆದುಕೊಂಡಿದ್ದರಿಂದ ಸ್ವಾವಲಂಬಿಯಾಗಿ ದುಡಿಯಬೇಕಾಯಿತು. ಮ್ಯೂನಿಚ್‌ನಲ್ಲಿ ಭಾಷೆ

ಕಲಿಸುವ ಶಿಕ್ಷಕಿಯಾದರು. ಆಗ ಬರೆದ ಮೊದಲ ಸಣ್ಣಕಥೆ ಪ್ರಸಿದ್ಧವಾಯಿತು. ಗೆದಿಷ್ಟೆ (1899), ನ್ಯೂ ಗೆದಿಷ್ಟೆ (1905) – ಇವು ಇವರ ಪ್ರಕಟಿತ ಕವನಸಂಕಲನಗಳು. ಜರ್ಮನ್ ಭಾವಗೀತೆಗಳಲ್ಲಿ ಇವರ ಕವಿತೆಗಳಿಗೆ ವಿಶಿಷ್ಟ ಸ್ಥಾನವಿದೆ.

•••••• ಮಾಹಿತಿ ವೇದಿಕೆ ••••

ಭಾರತದ ಪ್ರಮುಖ ಲೇಖಕಿಯರಲ್ಲೊಬ್ಬರು ಚಿತ್ರಾ ಮುದ್ಗಲ್. ಸಾಮಾಜಿಕ ಕಾರ್ಯಕರ್ತೆಯೂ ಆಗಿರುವ ಈ ಲೇಖಕಿ, ಕಾರ್ಮಿಕವಲಯದ, ಮಾನವಹಕ್ಕುಗಳ ಹೋರಾಟಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಪಟ್ಟಭದ್ರ ಶಕ್ತಿಗಳ ಹುನ್ನಾರ, ಲಿಂಗತಾರತಮ್ಯ, ಅವುಗಳ ನೂರಾರು ರೂಪಗಳನ್ನು ಮಾನವೀಯತೆಯ ನೇಪಥ್ಯದಲ್ಲಿ ಅವರು ಗುರುತಿಸುತ್ತಾರೆ. ಮಾನವೀಯತೆಯ ದುರಂತದ ದೃಷ್ಟಿಕೋನವು ಚಿತ್ರಾರ ಸಾಹಿತ್ಯಕ್ಕೆ ಮಹತ್ವವನ್ನೂ, ವೈಶಿಷ್ಟ್ಯವನ್ನೂ ತಂದುಕೊಟ್ಟಿದೆ. ಚಿತ್ರಾರ ಹಲವಾರು ಸಣ್ಣಕಥೆಗಳು ವಿವಿಧ ಭಾರತೀಯ ಭಾಷೆಗಳಿಗೆ ಅನುವಾದಿಸಲ್ಪಟ್ಟಿವೆ. 'ಏಕ್ ಜಮೀನ್ ಅಪನಿ', 'ಗಿಲಿಗಡು', 'ಆವಾಂ' ಅವರ ಪ್ರಸಿದ್ಧ ಗ್ರಂಥಗಳಾಗಿವೆ.

•••••• ಮಾಹಿತಿ ವೇದಿಕೆ ••••

ಕಳೆದ ಮೂವತ್ತು ವರ್ಷಗಳಿಂದ ಬೆಳೆದುಬಂದ ಪರಿಕಲ್ಪನೆಯೇ ಮಹಿಳಾ ಸಶಕ್ತೀಕರಣ. ಸ್ತ್ರೀವಾದಿ ಚಿಂತನೆ; ಅಭಿವೃದ್ಧಿ ಪ್ರಕ್ರಿಯೆ; ತಳಮಟ್ಟದ ಜನರ ಸಂಘಟನೆ – ಈ ಮೂರು ವಿಚಾರಧಾರೆಗಳಲ್ಲಿ ಅದರ ಮೂಲವನ್ನು ಗುರುತಿಸಬಹುದು. ಸಂಶೋಧಕಿ ಜೋ ರೋಲ್ಯಾಂಡ್ ಮಹಿಳಾ ಸಶಕ್ತೀಕರಣವನ್ನು 'ಶಕ್ತಿ ನೀಡುವ', 'ಇತರರೊಂದಿಗೆ ಹಂಚಿಕೊಳ್ಳುವ ಶಕ್ತಿ' ಹಾಗೂ 'ಆಂತರಿಕ ಶಕ್ತಿ' ಎಂಬ ಪ್ರಕಾರಗಳೊಂದಿಗೆ ಅರ್ಥೈಸುತ್ತಾರೆ. ಬೇರೆಯವರ ಮೇಲೆ ಅಧಿಕಾರ ಚಲಾಯಿಸುವ ಶಕ್ತಿಯನ್ನು ಮಹಿಳಾ ಸಶಕ್ತೀಕರಣಕ್ಕೆ ಅನ್ವಯಿಸಲಾಗುವುದಿಲ್ಲ ಎನ್ನುತ್ತಾರೆ. ಇದುವರೆಗೆ ಕಳೆದುಕೊಂಡ ಅವಕಾಶಗಳನ್ನು, ಸಮಾನತೆಯನ್ನು ಪಡೆಯುವುದು. ಲಿಂಗತಾರತಮ್ಯಗಳಿಂದ ಮುಕ್ತಿ ಹೊಂದಿ ಸ್ವತಂತ್ರ, ಸ್ವಾವಲಂಬಿ ವ್ಯಕ್ತಿಯಾಗಿ ಮಹಿಳೆಯರನ್ನು ರೂಪಿಸುವುದೇ ಮಹಿಳಾ ಸಶಕ್ತೀಕರಣದ ಅರ್ಥ ಹಾಗೂ ಗುರಿಯಾಗಿದೆ.

•••••• ಮಾಹಿತಿ ವೇದಿಕೆ ••••

ಬಂಗಾಳಿ ಭಾಷಾ ಸಾಹಿತಿ ನಬನೀತಾ ದೇವ್ ಸೇನ್ ಮೂಲತಃ ಕೋಲ್ಕತದವರು. ಜನಿಸಿದ್ದು 1938ರ ಜನವರಿ 13ರಂದು. ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪದವಿ, ಹಾರ್ವರ್ಡ್ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದ ಇವರು, ಇಂಡಿಯಾನಾ ವಿಶ್ವವಿದ್ಯಾಲಯದಿಂದ ಪಿಎಚ್‌ಡಿ ಗಳಿಸಿದರು. ಬಂಗಾಳಿ ಭಾಷೆಯಲ್ಲಿ 80ಕ್ಕೂ ಹೆಚ್ಚು ಪುಸ್ತಕ ಬರೆದಿರುವ ನಬನೀತಾಗೆ, ಸಣ್ಣಕತೆ, ಕವನ, ನಾಟಕ, ಮಕ್ಕಳ ಕತೆ ಬರೆಯುವುದರಲ್ಲಿ ಆಸಕ್ತಿ ಹೆಚ್ಚು. ಹಾರ್ವರ್ಡ್, ಕೊಲಂಬಿಯಾ ವಿಶ್ವವಿದ್ಯಾಲಯಗಳ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದಾರೆ. ಯುಜಿಸಿಯ ಸೀನಿಯರ್ ಫೆಲೋ ಆಗಿಯೂ ಇವರು ಕಾರ್ಯನಿರ್ವಹಿಸಿದ್ದಾರೆ.

•••••• ಮಾಹಿತಿ ವೇದಿಕೆ ••••

•••••• ಮಾಹಿತಿ ವೇದಿಕೆ ••••

ಭರತನಾಟ್ಯದಲ್ಲಿ ಮೂಗೂರು ಶೈಲಿಯನ್ನು ಪ್ರಸಿದ್ಧಗೊಳಿಸಿದವರು ಮೂಗೂರು ಜೇಜಮ್ಮ. ಅವರು ಮೈಸೂರು ಜಿಲ್ಲೆಯ ಮೂಗೂರು ಎಂಬಲ್ಲಿ 1899ರ ಮೇ 12ರಂದು ಜನಿಸಿದರು. ತಾತ ಅಮೃತಪ್ಪನವರಿಂದ ಪ್ರಾರಂಭಿಕ ನೃತ್ಯಶಿಕ್ಷಣ ಪಡೆದ ಜೇಜಮ್ಮ, ನಂತರ ತಾಯಿ ಗೌರಮ್ಮನವರ ಬಳಿ ಕಲಿಕೆಯನ್ನು ಮುಂದುವರಿಸಿದರು. ಮಳವಳ್ಳಿ ಸುಬ್ಬಣ್ಣನವರಲ್ಲಿ ಸಂಗೀತ, ಮಹಾಂತ ಸ್ವಾಮಿಗಳಲ್ಲಿ ಸಂಸ್ಕೃತಾಭ್ಯಾಸ ಮಾಡಿದರು. 1930ರಲ್ಲಿ ಅವರು ಸ್ತ್ರೀನಾಟಕ ಮಂಡಲಿ ಸ್ಥಾಪಿಸಿದರು. ಇದು ಮಹಿಳೆಯೊಬ್ಬರಿಂದ ಸ್ಥಾಪಿತವಾದ ವೃತ್ತಿನಾಟಕ ಸಂಸ್ಥೆ ಎಂಬ ಹೆಗ್ಗಳಿಕೆ ಗಳಿಸಿತು. ಅವರಿಗೆ ಮೈಸೂರು ಸಂಗೀತ ನಾಟಕ ಅಕಾಡೆಮಿಯು 1963ರಲ್ಲಿ ಸನ್ಮಾನಿಸಿತು. 1983ರ ಆಗಸ್ಟ್ 15ರಂದು ಜೇಜಮ್ಮ ನಿಧನರಾದರು.

•••••• ಮಾಹಿತಿ ವೇದಿಕೆ ••••

ಕ್ಯಾಲಿಫೋರ್ನಿಯಾಕ್ಕೆ ಮೂರನೇ ಮಹಿಳಾ ಸೆನೆಟರ್ ಎಂಬ ಹೆಗ್ಗಳಿಕೆ ಹೊಂದಿರುವವರು ಭಾರತಮೂಲದ ಅಮೆರಿಕನ್ ಪ್ರಜೆ ಕಮಲಾ ಹ್ಯಾರಿಸ್. ಇವರು ಜನಿಸಿದ್ದು 1964ರ ಅಕ್ಟೋಬರ್ 20ರಂದು ಕ್ಯಾಲಿಫೋರ್ನಿಯಾದ ಓಕ್‌ಲ್ಯಾಂಡ್‌ನಲ್ಲಿ. ಹಾರ್ವರ್ಡ್ ವಿಶ್ವವಿದ್ಯಾಲಯದಿಂದ ಪದವಿ, ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಉನ್ನತ ಶಿಕ್ಷಣ ಪಡೆದರು. 2003ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋದ ಜಿಲ್ಲಾ ಅಟಾರ್ನಿ ಆಗಿ ಆಯ್ಕೆಯಾದರು. 2010ರಲ್ಲಿ ಕ್ಯಾಲಿಫೋರ್ನಿಯಾದ ಅಟಾರ್ನಿ ಜನರಲ್ ಆದರು. ಇವರು ಸ್ಯಾನ್‌ಫ್ರಾನ್ಸಿಸ್ಕೋ ಜಿಲ್ಲಾ ಅಟಾರ್ನಿ ಕಚೇರಿಯಲ್ಲಿ, ಪರಿಸರ ನ್ಯಾಯ ಯುನಿಟ್ ಸೃಷ್ಟಿಸಿದ್ದರು. ಕಮಲಾಗೆ ಥರ್ಗಡ್ ಮಾರ್ಷಲ್ ಪ್ರಶಸ್ತಿ ದೊರಕಿದೆ.

•••••• ಮಾಹಿತಿ ವೇದಿಕೆ ••••

ಖ್ಯಾತ ಬ್ರಿಟಿಷ್ ಗಾಯಕಿ-ಗೀತರಚನೆಗಾರ್ತಿ ಎಲಿನಾ ಜೇನ್ ಗೌಲ್ಡಿಂಗ್. ಜನಿಸಿದ್ದು 1986ರ ಡಿಸೆಂಬರ್ 30ರಂದು ಇಂಗ್ಲೆಂಡ್‌ನ ಹಿಯರ್‌ಫೋರ್ಡ್‌ನಲ್ಲಿ. 15ನೇ ವರ್ಷದಲ್ಲಿರುವಾಗಲೇ ಹಾಡನ್ನು ರಚಿಸಲು ಆರಂಭಿಸಿದ ಇವರು, 2010ರಲ್ಲಿ ಲೈಟ್ಸ್ ಎಂಬ ಆಲ್ಬಮ್ ಬಿಡುಗಡೆಗೊಳಿಸಿದರು. 2012ರಲ್ಲಿ ಹ್ಯಾಲ್ಸಿಯಾನ್ ಎಂಬ ಆಲ್ಬಮ್ ಬಿಡುಗಡೆಗೊಳಿಸಿದ ಎಲಿನಾ ವಿಶ್ವದಾದ್ಯಂತ ಅಪಾರ ಕೇಳುಗರನ್ನು ಸೃಷ್ಟಿಸಿದರು. ಇವರು 2011ರಲ್ಲಿ ಬಂಕಿಂಗ್‌ಹ್ಯಾಮ್ ಅರಮನೆಯಲ್ಲಿ ನಡೆದ ಬ್ರಿಟನ್ ರಾಜಕುಮಾರ ವಿಲಿಯಂ ಮತ್ತು ಕ್ಯಾಥರಿನ್ ಮಿಡಲ್‌ಟನ್ ವಿವಾಹ ಮಹೋತ್ಸವದಲ್ಲಿಯೂ ಸಂಗೀತದ ಪ್ರದರ್ಶನ ನೀಡಿದ್ದರು. 2014ರ ಬ್ರಿಟ್ಸ್ ಅವಾರ್ಡ್ಸ್‌ನಲ್ಲಿ ಎಲಿನಾಗೆ ಬ್ರಿಟಿಷ್ ಮಹಿಳಾ ಸೋಲೋ ಗಾಯಕಿ ಪ್ರಶಸ್ತಿ ದೊರಕಿದೆ.

•••••• ಮಾಹಿತಿ ವೇದಿಕೆ ••••

